

ಕರ್ನಾಟಕ ಗಾಂಧಿ ಸ್ಮಾರಕ ನಿಧಿ

**ಬಾಪು ಪ್ರಪಂಚ**
ಕನ್ನಡ–ಇಂಗ್ಲೀಷ್ ಮಾಸಿಕ

**BAPU PRAPANCHA**
(A monthly Kannada English Magazine of Gandhian Thoughts)

ಪ್ರಧಾನ ಸಂಪಾದಕರು
**ನಾಡೋಜ ಡಾ. ವೂಡೇ ಪಿ. ಕೃಷ್ಣ**

Chief Editor :
**Nadoja Dr Wooday P Krishna**

ಸಂಪಾದಕರು :
**ಎನ್. ಆರ್. ವಿಶುಕುಮಾರ್**

Editor :
**N R Vishukumar**

**ಪ್ರಕಾಶಕರು :**
**ಕಾರ್ಯದರ್ಶಿ,**
**ಕರ್ನಾಟಕ ಗಾಂಧಿ ಸ್ಮಾರಕ ನಿಧಿ**
ಗಾಂಧಿ ಭವನ, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು – 560 001

Published by :
**Secretary**
**Karnataka Gandhi Smaraka Nidhi**
Gandhi Bhavana, Kumara Park East
Bangalore - 560 001

080 22261967 / 9738605799
gandhibhavanabengaluru@gmail.com

Printed at :
**Printastic**
272, 2nd Main Road, 6th Cross,
Lavakushanagar, Laggere Bangalore-58
Ph : +91 9886747417
E-mail : printastic.21@gmail.com


ಲೇಖನಗಳಲ್ಲಿ ವ್ಯಕ್ತವಾದ ಅಭಿಪ್ರಾಯಗಳು ಲೇಖಕರವು
ಬಾಪು ಪ್ರಪಂಚದಲ್ಲಿನ ಚಿತ್ರಗಳು ಸಾಂದರ್ಭಿಕವಾಗಿರುತ್ತದೆ


Design : **Ujwal Creations**, Bangalore



ರೂ. 28/– **BAAPU PRAPANCHA**

ಕರ್ನಾಟಕ ಗಾಂಧಿ ಸ್ಮಾರಕ ನಿಧಿ

# ಬಾಪು ಪ್ರಪಂಚ

ಕನ್ನಡ–ಇಂಗ್ಲೀಷ್ ಮಾಸಿಕ ಸಂಪುಟ–05 • ಸಂಚಿಕೆ–12 • ಮೇ 2024



**05** ಮೇ-1 ; ವಿಶ್ವ ಕಾರ್ಮಿಕರ ದಿನಾಚರಣೆ
- ವಿವೇಕಾನಂದ ಹೆಚ್. ಕೆ.

**08** ಸರ್ವೋದಯ ನಾಯಕ ಅರಿಯರತ್ನೆ ಅಸ್ತಂಗತ
- ಡಾ. ಹೆಚ್. ಎಸ್. ಸುರೇಶ್

**11** ನನ್ನ ಕನಸಿನ ಭಾರತ

**12** ಗಾಂಧಿ ಮತ್ತು ಕರ್ನಾಟಕ (ಭಾಗ-12)

**19** ಚಂದದ ಬದುಕು : ಅರಸೀಕೆರೆ ಮಕ್ಕಳ ಶಿಬಿರ
- ವಾಣಿ ಪೆರಿಯೋಡಿ

**22** **Demise of Dhirubhai Mehta - A Veteran Gandhian**

**29** ತಮಿಳುನಾಡಿನಲ್ಲಿ ಮಹಾತ್ಮ

**30** ಮತದಾರ ಜಾಗೃತಿ ಶಿಬಿರ
- ಸವಿತಾ ನಾಗಭೂಷಣ

**32** ಚಿತ್ರಾವಳಿ







ಮಾನ್ಯರೆ,

ಬಾಪು ಪ್ರಪಂಚ ಸಂಚಿಕೆಗಳು ಚೆನ್ನಾಗಿ ಬರುತ್ತಿವೆ . ಇದನ್ನು ಯುವ ಸಮುದಾಯಕ್ಕೆ ಶಾಲಾ ಕಾಲೇಜು ವಾಚನಾಲಯಗಳ ಮೂಲಕ ತಲುಪಿಸಲು ಪ್ರಯತ್ನಿಸಿ.

ವಿದ್ಯಾರ್ಥಿಗಳಿಂದ ಲೇಖನ ಬರೆಯಿಸಲು ಪ್ರೋತ್ಸಾಹ ನೀಡಿ. ಎನ್ ಎಸ್ ಎಸ್ ಜೊತೆ ಇನ್ನಷ್ಟು ಸಂಯೋಜನೆ ಮಾಡಿಕೊಳ್ಳಿ.

ಹೊಸ ಹೊಸ ಆಲೋಚನೆಗಳು ಬರಬೇಕು . ಗಾಂಧಿ ವಿಚಾರಗಳು ಕನಿಷ್ಠ ದಿನ ನಿತ್ಯದ ಕೆಲಸ ಕಾರ್ಯಗಳಲ್ಲಿ ಸಣ್ಣ ಪ್ರಮಾಣದಲ್ಲಿಯಾದರೂ ಬಳಕೆಯಾಗಬೇಕು. ಈ ನಿಟ್ಟಿನಲ್ಲಿ ಗಾಂಧಿ ಸ್ಮಾರಕ ನಿಧಿ ಕಾರ್ಯಸೂಚಿ ರೂಪಿಸಿ ಮುನ್ನಡೆಯಲಿ.

**ಯುವ ಗಾಂಧಿ ಬಳಗ, ಬೆಂಗಳೂರು**

ಮಾನ್ಯರೆ,

ಗಾಂಧೀಜಿ ವಿಶ್ವ ಮಾನ್ಯರು . ಈಗ ಅವರ ಬಗ್ಗೆ ಬೇರೆ ಬೇರೆ ದೇಶಗಳಲ್ಲಿ ಯಾವ ಅಭಿಪ್ರಾಯವಿದೆ ಎನ್ನುವ ಬಗ್ಗೆ ಬೆಳಕು ಚೆಲ್ಲುವ ಲೇಖನ ಸರಣಿ ಸಾಧ್ಯವಾದರೆ ಮಾಡಿ.

**ಕುಲಕರ್ಣಿ, ಧಾರವಾಡ**

ಮಾನ್ಯರೆ,

ಗಾಂಧೀಜಿಯವರ ಬಗ್ಗೆ ಇರುವ ಕಾರ್ಟೂನ್ ಗಳನ್ನು ಪರಿಚಯಿಸಿ.ವ್ಯಂಗ್ಯ ಚಿತ್ರಕಾರ ಸಂಘಟನೆಗಳು ನಿಮ್ಮ ನೆರವಿಗೆ ಬರಬಹುದು . ವಾರ್ತಾ ಇಲಾಖೆ ಹಿಂದೆ ಗೆರೆಗಳಲ್ಲಿ ಗಾಂಧಿ ಎನ್ನುವ ಕಿರು ಪುಸ್ತಕ ಪ್ರಕಟಿಸಿದೆ.

**ಜಗನ್ನಾಥ ಪ್ರಕಾಶ್, ಬೆಂಗಳೂರು**

ಪ್ರಿಯರೆ,

ಬಾಪೂ ಪ್ರಪಂಚ ಸಂಚಿಕೆಯ ಬಗ್ಗೆ ಓದುಗರು ವ್ಯಕ್ತಪಡಿಸುತ್ತಿರುವ ಸದಭಿಪ್ರಾಯಗಳಿಗೆ ಗಾಂಧಿ ಸ್ಮಾರಕ ನಿಧಿ ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ನಿಮ್ಮ ಅಪೇಕ್ಷೆಯಂತೆ ಬಾಪೂ ಪ್ರಪಂಚ ಪತ್ರಿಕೆಯನ್ನು ಹೆಚ್ಚು ಜನರಿಗೆ ತಲುಪಿಸಲು ಪ್ರಯತ್ನಿಸುತ್ತೇವೆ.

**ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಪ್ರಕಟಣೆಗಳು ಮತ್ತು ಬಾಪೂ ಪ್ರಪಂಚದ ಇತ್ತೀಚಿನ ಸಂಚಿಕೆಗಳನ್ನು**
**https://gandhibhavan.in**
**ಜಾಲತಾಣದಲ್ಲಿ ವೀಕ್ಷಿಸಿ.**



ಚಂದಾ ಕಳುಹಿಸುವ ಮತ್ತು ಪತ್ರಿಕೆಯ ಬಗ್ಗೆ ತಮ್ಮ ಅಭಿಪ್ರಾಯ ತಿಳಿಸುವ ವಿಳಾಸ :


**ಸಂಪಾದಕರು, ಬಾಪು ಪ್ರಪಂಚ**
ಗಾಂಧಿ ಭವನ
ಕುಮಾರ ಪಾರ್ಕ್ ಪೂರ್ವ,
ಬೆಂಗಳೂರು –560001
gandhibhavanabengaluru@gmail.com




ಬಾಪು ಪ್ರಪಂಚ ಪತ್ರಿಕೆಯ ವಾರ್ಷಿಕ ಚಂದಾ ಹಣ 250 ರೂಗಳನ್ನು ಈ ಕೆಳಗಿನ ಕ್ಯೂಆರ್ ಕೋಡ್ ಮೂಲಕ ಪಾವತಿಸಿ, ನಿಮ್ಮ ಅಂಚೆ ವಿಳಾಸವನ್ನು ಗಾಂಧಿ ಭವನದ ಮೇಲಿನ ವಿಳಾಸಕ್ಕೆ ಹಣ ಪಾವತಿ ವಿವರಗಳ ಜೊತೆ ಕಳುಹಿಸಿ.

# ಮೇ 1 ವಿಶ್ವ ಕಾರ್ಮಿಕರ ದಿನಾಚರಣೆ

ವಿವೇಕಾನಂದ. ಎಚ್.ಕೆ.




"ಜಗತ್ತಿನ ಎಲ್ಲಾ ಶೋಷಿತರು – ದೌರ್ಜನ್ಯಕ್ಕೆ ಒಳಗಾದವರು ನನ್ನ ಸಂಗಾತಿಗಳು"

– ಚೆಗುವಾರ

ವಿಶ್ವ ಕಾರ್ಮಿಕರ ದಿನದಂದು ಜಗತ್ತಿನ ಎಲ್ಲಾ ಜೀವಚರಗಳು ಒಂದಲ್ಲ ಒಂದು ರೀತಿಯಲ್ಲಿ ಕಾರ್ಮಿಕರೇ ಎಂಬ ಭಾವದೊಂದಿಗ ಎಲ್ಲರಿಗೂ ಶುಭಾಶಯಗಳು.......ನಿಮ್ಮ ಸಂತೋಷದ ಸಂದರ್ಭಗಳಲ್ಲಿ ಇವರುಗಳು ಸಹ ನೆನಪಾಗಲಿ.........

ಚುಮು ಚುಮು ಚಳಿಯಲ್ಲಿ ನಿಮಗೆ ನಿಮ್ಮ ಪ್ರೇಯಸಿ/ ಪ್ರಿಯಕರ ನೆನಪಾದರೆ ಸಂತೋಷಿಸುವೆವು.ಹಾಗೆಯೇ, ಹಿಮಾಲಯದ ತಪ್ಪಲಿನಲ್ಲಿ ಆ ನಡುಗುವ ಚಳಿಯಲ್ಲಿ ನಮಗಾಗಿ ಕಾರ್ಯ ನಿರ್ವಹಿಸುತ್ತಿರುವ ಸೈನಿಕರೂ ನೆನಪಾಗಲಿ ಎಂದು ಆಶಿಸುವೆ .......

ಅತ್ಯಂತ ತೀವ್ರ ಉಷ್ಣ ತಾಪಮಾನದಲ್ಲಿ ಅನಿರೀಕ್ಷಿತವಾಗಿ ತಣ್ಣನೆಯ ನೀರ ಮಜ್ಜಿಗೆ ಮತ್ತು ಎಳನೀರು ದೊರೆತು ಅದು ಗಂಟಲಲ್ಲಿ ಇಳಿಯುವಾಗ ಆಸ್ವಾದಿಸುವ ನಿಮ್ಮ ಮನಸ್ಥಿತಿಗೆ ಸಂತೋಷಪಡುವೆವು. ಆದರೆ ಅದೇ ಸಮಯದಲ್ಲಿ ಅದು ತಯಾರಾಗಲು ಬೆವರು ಸುರಿಸಿದ ರೈತರು ನೆನಪಾಗಲಿ ಎಂದು ಆಶಿಸುವೆ......

ಮೋಡ ಬಿರಿದಂತೆ ಸುರಿಯುವ ಮಳೆ ಮತ್ತು ಗಡಗಡ ನಡುಗುವ ಚಳಿಯಲ್ಲಿ ಬೆಚ್ಚಗಿನ ಹೊದಿಕೆ – ಆಶ್ರಯ ನಿಮಗೆ ಸಿಕ್ಕರೆ ಸಂತೋಷಿಸುವೆವು.ಹಾಗೆಯೇ, ಬೀದಿ ಬದಿಯಲ್ಲಿ ಹೊದಿಕೆ ಇಲ್ಲದೆ ಚಳಿಗೆ ವಿಲವಿಲ ಒದ್ದಾಡುತ್ತಾ ಮಲಗಿರುವ ಅನಾಥ ನಿರ್ಗತಿಕ ಜನರೂ ನೆನಪಾಗಲಿ ಎಂದು ಆಶಿಸುವೆ .........

ಮಾಗಿಯ ಚಳಿಗೆ ನಿಮಗೆ ಬಿಸಿಬಿಸಿ ಕಾಫಿ/ಟೀ ಸಿಕ್ಕರೆ ಸಂತೋಷಿಸುವೆವು.

ಹಾಗೆಯೇ,ಸುರಿಯುವ ಮಂಜಿನಲ್ಲಿ ಕಾಫಿ/ಟೀ ತೋಟಗಳಲ್ಲಿ ಕೆಲಸ ಮಾಡುವ ಆ ಕೂಲಿ ಕಾರ್ಮಿಕರ ಸ್ಥಿತಿಯೂ ನಿಮಗೆ ನೆನಪಾಗಲಿ ಎಂದು ಆಶಿಸುವೆ ............

ಹಿಮದ ರಾಶಿಯ ನಡುವೆ ಗರಿಗರಿ ಸುಟ್ಟ ಕೋಳಿ ಮಾಂಸದ ಜೊತೆಗೆ ರಮ್/ವಿಸ್ಕಿ ನಿಮಗೆ ಸಿಕ್ಕರೆ ಸಂತೋಷಿಸುವೆವು.



ಹಾಗೆಯೇ,ಬೆಳಗಿನ ಅದುರುವ ಚಳಿಯಲ್ಲಿ ಹೊಲ ಉಳುವ ರೈತನೂ ನಿಮಗೆ ನೆನಪಾಗಲಿ ಎಂದು ಆಶಿಸುವೆ.............

ತಲೆಯಿಂದ ಪಾದದವರೆಗೂ ಬೆಚ್ಚನೆ ಹೊದ್ದು ಮನೆಯ ಬಾಲ್ಕನಿಯಲ್ಲಿ ಕಾಲಮೇಲೆ ಕಾಲುಹಾಕಿ ಕುಳಿತು ಬಿಸಿಬಿಸಿ ಬೆಣ್ಣೆ ದೋಸೆ / ತುಪ್ಪದ ಉಪ್ಪಿಟ್ಟು ತಿನ್ನುತ್ತಾ ಪತ್ರಿಕೆ ಓದುವ ಸುಖ ನಿಮ್ಮದಾದರೆ ಸಂತೋಷಿಸುವೆವು.

ಹಾಗೆಯೇ, ಹತ್ತರ ಪುಟ್ಟ ಹುಡುಗನೊಬ್ಬ ಆ ಭಯಂಕರ ಚಳಿಯಲ್ಲಿ ಚಡ್ಡಿಹಾಕಿಕೊಂಡು ಬೆಳಗ್ಗೆ 4ಕ್ಕೆ ಎದ್ದು ಮನೆಮನೆಗೆ ಪತ್ರಿಕೆ ಹಾಕುವ ಕಷ್ಟ ನೆನಪಾಗಲಿ ಎಂದು ಆಶಿಸುವೆ................

ನಿಮ್ಮ ಸುಖಕ್ಕೆ ಹೊಟ್ಟೆ ಉರಿ ಪಡಲಾರೆವು. ಆದರೆ ಆ ಶ್ರಮಜೀವಿಗಳ ಸಂಕಷ್ಟಗಳಿಗೆ ಮರುಕವಿದೆ/ ಸಹಾನುಭೂತಿಯಿದೆ.

ಅವರೂ ಶ್ರಮಪಡಲಿ. ಆದರೆ ಅವರ ನೋವು ಕಷ್ಟದ ಪ್ರಮಾಣ ಕಡಿಮೆಯಾಗಿ ಅವರ ಜೀವನಮಟ್ಟ ಸುಧಾರಣೆಯಾಗಿ ಅವರೂ ನೆಮ್ಮದಿ ಬದುಕು ಕಾಣುವಂತಾಗಲಿ.

ಶ್ರಮಿಕರ ಎದೆಯ ಮೇಲಿನ ಬೆವರ ಹನಿಗಳು ಇಂಗ್ಲೆಂಡಿನ ಮ್ಯಾಂಚೆಸ್ಟರ್ ನ ಬಟ್ಟೆ ಗಿರಣಿಗಳು, ದಕ್ಷಿಣ ಆಫ್ರಿಕಾದ ಚಿನ್ನದ ಗಣಿಗಳು, ಚೀನಾದ ಕಬ್ಬಿಣದ ಅದಿರ ಗಣಿಗಳು, ಅರೇಬಿಯನ್ ಮರುಭೂಮಿಯ ಕೂಲಿಗಳು, ಬ್ರೆಜಿಲ್ ಕಾಫಿ ತೋಟದ ಕಾರ್ಮಿಕರು, ಸುಡಾನ್, ಇಥಿಯೋಪಿಯಾದ ಗುಲಾಮರು, ಇಟಲಿಯ ಕ್ವಾರಿಯ ಕಲ್ಲುಗಣಿ ಶ್ರಮಿಕರು,ಅಮೆರಿಕದ ಹಾಲಿವುಡ್ನ ಸಿನೆಮಾ ಕೆಲಸಗಾರರು, ಹಾಂಕಾಂಗ್ ನ ಹೋಟೆಲ್ ಕಾರ್ಮಿಕರು,ಆಸ್ಟ್ರೇಲಿಯಾ ದ್ವೀಪಗಳ ಮೀನುಗಾರರು,ಬಾಂಗ್ಲಾದೇಶದ ಬಿರು ಬಿಸಿಲಿನಲ್ಲಿ ನಡೆದಾಡುವ ಟಾಂಗಾವಾಲಾಗಳು, ಟಿಬೆಟ್ಟಿನ ದುರ್ಗಮ ರಸ್ತೆಗಳಲ್ಲಿ ವಾಹನ ಚಲಾಯಿಸುವ ಚಾಲಕರು,ಸಿರಿಯಾದ ಆಸ್ಪತ್ರೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ದಾದಿಯರು,ಉತ್ತರ ಕೊರಿಯಾದ ಸರ್ವಾಧಿಕಾರಕ್ಕೆ ನಲುಗಿ ಉಸಿರಾಡಲು ಕಷ್ಟ ಪಡುತ್ತಿರುವ ಸ್ವತಂತ್ರ ಜೀವಿಗಳು, ಭಾರತದ ಮ್ಯಾನ್ ಹೋಲ್ ಗಳಲ್ಲಿ ಕೆಲಸ ಮಾಡುವ ನನ್ನದೇ ಅಣ್ಣ ತಮ್ಮಂದಿರು, ಮುಂಬಯಿನ ರೈಲ್ವೆ ಕೂಲಿಗಳು, ಸೂರತ್ ನ ಬಟ್ಟೆ ಗಿರಣಿಗಳ ಕೆಲಸಗಾರರು, ವಿಶಾಖಪಟ್ಟಣದ ಮೀನುಗಾರರು, ಕೊಯಮತ್ತೂರಿನ ಪಟಾಕಿ ತಯಾರಕರು, ಮಂಗಳೂರಿನ ಬೀಡಿ ಕಟ್ಟುವವರು,ಕೇರಳದ ಚಹಾ ತೋಟದ ದಿನಗೂಲಿಗಳು, ದೆಹಲಿಯ ಕಟ್ಟಡ ಕಾರ್ಮಿಕರು, ಜೈಪುರದ ಕಲ್ಲು ಬಂಡೆ ಹೊಡೆಯುವವರು, ಇಳಕಲ್ ನ ಸೀರೆ ನೇಯುವವರು, ಹೊಸಕೋಟೆಯ ಇಟ್ಟಿಗೆ ಕಾರ್ಮಿಕರು, ಲಕ್ನೋ ಬಸ್ ನಿಲ್ದಾಣದ ಕಸ ಗುಡಿಸುವವರು, ಅಸ್ಸಾಂನ ನಿರಾಶ್ರಿತರು,ಮಣಿಪುರದ ಕ್ಷೌರಿಕರು,ಭುವನೇಶ್ವರದ ಬಟ್ಟೆ ತೊಳೆಯುವವರು, ಹೀಗೆ ಸಾಕಷ್ಟು ಶ್ರಮ ಜೀವಿಗಳು ನೆನಪಾಗುತ್ತಾರೆ.....

ನೆನಪಿರಲಿ, ಜಗತ್ತಿನ ಪ್ರತಿ ಜೀವಿಯೂ ಕಾರ್ಮಿಕನೇ.

ಶ್ರೀಮಂತ ರಾಷ್ಟ್ರ ಕತಾರ್, ಬಲಿಷ್ಠ ರಾಷ್ಟ್ರ ಅಮೆರಿಕ, ಬಡ ರಾಷ್ಟ್ರ ಇಥಿಯೋಪಿಯ, ಆಧ್ಯಾತ್ಮಿಕ ರಾಷ್ಟ್ರ ಭಾರತ, ಧರ್ಮನಿಷ್ಠ ರಾಷ್ಟ್ರ ಇರಾನ್, ಹಿಂಸಾತ್ಮಕ ರಾಷ್ಟ್ರ ಸಿರಿಯಾ, ಶಾಂತಿಯುತ ರಾಷ್ಟ್ರ ನಾರ್ವೆ, ಸುಂದರ ರಾಷ್ಟ್ರ ಸ್ವಿಟ್ಜರ್ಲ್ಯಾಂಡ್, ಯಾವುದೇ ಆಗಿರಲಿ, ಮಗುವಿನಿಂದ ವೃದ್ಧರವರೆಗೆ, ಎಲ್ಲರೂ ಒಂದಲ್ಲಾ ಒಂದು ಕೆಲಸದಲ್ಲಿ ತೊಡಗಲೇಬೇಕು.......

ವಿಶ್ವದ ಅತ್ಯಂತ ಶ್ರೀಮಂತ ವ್ಯಕ್ತಿ ತನಗೆ ಎಲ್ಲವೂ ದೊರೆತಾಗಲೂ ಸುಮ್ಮನೆ ಇರಲು ಸಾಧ್ಯವಿಲ್ಲ. ಏನಾದರೂ ಮಾಡಲೇ ಬೇಕು. ಇಲ್ಲದಿದ್ದರೆ ಆತ ನಿರ್ಜೀವಿಯಾಗುತ್ತಾನೆ. ಹಾಗೆಯೇ ಭಿಕ್ಷುಕ ಕೂಡ ತನ್ನ ಮಿತಿಯಲ್ಲಿ ಕೆಲಸ ಮಾಡಲೇಬೇಕು....

ಆದರೆ, ಕೆಲಸದ ರೂಪಗಳು, ಮಾರ್ಗಗಳು, ಗುರಿಗಳು, ಏರಿಳಿತಗಳು, ಅವಶ್ಯಕತೆಗಳು, ಅನಿವಾರ್ಯಗಳು ಬೇರೆ ಬೇರೆಯಾಗಿರುತ್ತದೆ ಅಷ್ಟೆ.ಸಾಮಾನ್ಯವಾಗಿ ಮತ್ತು ಸರಳವಾಗಿ ಹೆಚ್ಚು ಶ್ರಮದಾಯಕ ಕೆಲಸ ಮಾಡುವ, ಕಡಿಮೆ ಹಣ ಗಳಿಸುವ, ಹೆಚ್ಚಿನ ಸುರಕ್ಷತೆ ಇಲ್ಲದ, ಸ್ವತಂತ್ರ ನಿರ್ಧಾರ ತೆಗೆದುಕೊಳ್ಳದ, ಮಾಲೀಕರ ಆಶಯಕ್ಕೆ ಅನುಗುಣವಾಗಿ ದುಡಿಯುವ, ಬದುಕಿನ ಅನಿವಾರ್ಯತೆಗೆ ಶೋಷಣೆಗೆ ಒಳಗಾಗುವವರನ್ನು ಕಾರ್ಮಿಕರು ಎಂದು ಕರೆಯಲಾಗುತ್ತದೆ.

ಒಂದಷ್ಟು ಹಿಂದೆ ಕೆಲವು ಮನುಷ್ಯರನ್ನು ಗುಲಾಮರೆಂದು ಪರಿಗಣಿಸಿ



**ದಕ್ಷಿಣ ಆಫ್ರಿಕಾದಲ್ಲಿ ಕಾರ್ಮಿಕರ ಹೋರಾಟದಲ್ಲಿ ಗಾಂಧಿ**







ಪ್ರಾಣಿಗಳಂತೆ ಅವರವರ ದೈಹಿಕ ಸಾಮರ್ಥ್ಯಕ್ಕೆ ತಕ್ಕಂತೆ ವ್ಯಾಪಾರವೂ ಮಾಡಲಾಗುತ್ತಿತ್ತು. ಅವರ ಯಾವ ಮೂಲಭೂತ ಅಂಶಗಳನ್ನು ಪರಿಗಣಿಸಲಾಗುತ್ತಿರಲಿಲ್ಲ ಆದರೆ, ಈಗಿನ ಆಧುನಿಕ ಜಗತ್ತಿನಲ್ಲಿ ಇದು ಇಲ್ಲವಾಗಿದೆ.

ಆದರೂ,ಕಾರ್ಮಿಕ ಶೋಷಣೆ ಬೇರೆ ಬೇರೆ ರೂಪದಲ್ಲಿ ಈಗಲೂ ಜೀವಂತವಿದೆ. ಈ ಬಗ್ಗೆ ಹಿಂದಿನಿಂದಲೂ ಒಂದಷ್ಟು ಪ್ರತಿಭಟನೆಗಳು ಆಗುತ್ತಿದ್ದರೂ ಸಮಗ್ರವಾಗಿ ಜಗತ್ತಿನ ಗಮನಸೆಳೆದ ಕೀರ್ತಿ ಕಾರ್ಲ್ ಮಾರ್ಕ್ಸ್ ಅವರಿಗೆ ಸಲ್ಲುತ್ತದೆ.

ಕಾರ್ಮಿಕರ ಶೋಷಣೆ ನಿಲ್ಲಬೇಕು ನಿಜ, ಆದರೆ ಅದಕ್ಕಾಗಿ ಶ್ರೀಮಂತ ಉದ್ಯಮಿಗಳನ್ನು ದ್ವೇಷಿಸಬಾರದು. ಸಂಘರ್ಷಕ್ಕಿಂತ ಸಮನ್ವಯತೆಗೆ ಹೆಚ್ಚಿನ ಮಹತ್ವ ಕೊಡಬೇಕು.

ಅದರಲ್ಲೂ ಬದಲಾದ ಈ ಆಧುನಿಕ ಕಾಲ ಘಟ್ಟದಲ್ಲಿ ಬಂಡವಾಳ ಶಾಹಿಗಳು ಕೂಡ ಮುಖ್ಯರಾಗುತ್ತಾರೆ. ಶೋಷಣೆ ತಪ್ಪಿಸುವ ಮಾರ್ಗಗಳು ಮುಖ್ಯವಾಗಬೇಕೆ ಹೊರತು ಸೇಡಿನ ಕ್ರಮಗಳು ಮೇಲುಗೈ ಪಡೆಯಬಾರದು. ಅದು ನಕ್ಸಲಿಸಂ ಎಂಬ ಹಿಂಸಾತ್ಮಕ ಸಿದ್ಧಾಂತಕ್ಕೆ ದಾರಿ ಮಾಡಿಕೊಡುತ್ತದೆ. ಅದು ತುಂಬಾ ಅಪಾಯಕಾರಿ.

ಈಗಲೂ  ನಿಕೃಷ್ಟವಾಗಿ ಬದುಕುತ್ತಿರುವ  ಕಾರ್ಮಿಕರು, ಅತ್ಯಂತ ಕಠಿಣ ಕೆಲಸಗಳಲ್ಲಿ ಜೀವದ ಹಂಗು ತೊರೆದು ದುಡಿಯುತ್ತಿರುವ ಕಾರ್ಮಿಕರು, ಲೈಂಗಿಕ ಶೋಷಣೆಗೆ ಒಳಗಾಗುತ್ತಿರುವ ಮಹಿಳಾ ಕಾರ್ಮಿಕರು,

ಹೋಟೆಲ್ ಮುಂತಾದ ಕಡೆ ಅಸಹನೀಯ ಕೆಲಸ ಮಾಡುತ್ತಿರುವ ಬಾಲ ಕಾರ್ಮಿಕರು ಮುಂತಾದವರ ಜೀವನಮಟ್ಟ ಸುಧಾರಿಸದೆ ದೇಶದ ಅಭಿವೃದ್ಧಿ ಸಾಧ್ಯವೇ ಇಲ್ಲ.

ಈ ಕಾರ್ಮಿಕ ದಿನದ ಸಂದರ್ಭದಲ್ಲಿ ನಮ್ಮ ವ್ಯವಸ್ಥೆಯಲ್ಲಿ, ಕಾರ್ಮಿಕರು, ಬಂಡವಾಳ ಶಾಹಿಗಳು, ವ್ಯಾಪಾರೋದ್ಯಮಿಗಳ ಮಧ್ಯೆ ಒಂದು ಸಮಾನತೆಯ ಮಾನವೀಯತೆಯ ಸಮನ್ವಯ ಸಾಧ್ಯವಾಗಲಿ ಮತ್ತು ಒಬ್ಬರಿಗೊಬ್ಬರು ಪ್ರೀತಿಸುವ ಗೌರವಿಸುವ ವ್ಯವಸ್ಥೆ ನಿರ್ಮಾಣವಾಗಲಿ ಎಂದು ಆಶಿಸುತ್ತೇನೆ .

■



# ಸರ್ವೋದಯ ನಾಯಕ ಅರಿಯರತ್ನೆ ಅಸ್ತಂಗತ

ಡಾ. ಹೆಚ್. ಎಸ್. ಸುರೇಶ್

ಏಪ್ರಿಲ್ 16 , 2024 ರಂದು ಶ್ರೀಲಂಕಾದ ಕೊಲಂಬೋದಲ್ಲಿ ತಮ್ಮ 92 ನೇ ವಯಸ್ಸಿನಲ್ಲಿ ನಿಧನರಾದ ಡಾಕ್ಟರ್ ಎ ಟಿ ಅರಿಯರತ್ನೆ ಅವರು **' ಶ್ರೀಲಂಕಾ ಗಾಂಧಿ '** ಎಂದೇ ಖ್ಯಾತರಾದವರು.

ಶ್ರೀಲಂಕಾ ಸರ್ವೋದಯ ಶ್ರಮದಾನ ಚಳುವಳಿಯ ಸಂಸ್ಥಾಪಕರು ಹಾಗೂ ಅಧ್ಯಕ್ಷರು ಆಗಿದ್ದ ಅರಿಯರತ್ನೆ ನವೆಂಬರ್ 5 1931 ರಂದು ಜನಿಸಿದರು . ಮಹಿಂದ್ರಾ ವಿದ್ಯಾಲಯ ಹಾಗೂ ವಿದ್ಯೋದಯ ವಿಶ್ವವಿದ್ಯಾನಿಲಯದಿಂದ ಬಿ.ಎ. ಪದವಿ ಮತ್ತು ಶಿಕ್ಷಕ ತರಬೇತಿ ಪಡೆದ ನಂತರ ಕೊಲಂಬೋದಲ್ಲಿನ ನಳಂದ ವಿದ್ಯಾನಿಲಯದಲ್ಲಿ ಪ್ರೌಢಶಾಲೆ ಅಧ್ಯಾಪಕರಾಗಿ 1972ರ ವರೆಗೆ ಸೇವೆ ಸಲ್ಲಿಸಿದರು .

ಬೌದ್ಧ ಧರ್ಮಾವಲಂಬಿಯಾಗಿದ್ದ ಅರಿಯರತ್ನೆ ತಮ್ಮ ಶಾಲಾ ದಿನಗಳಲ್ಲಿ ಗಾಂಧೀಜಿಯವರಿಂದ ಆಕರ್ಷಿತರಾದರು. ಗಾಂಧೀಜಿಯವರ 11 ವ್ರತಗಳಲ್ಲಿ ಒಂದಾದ ಶರೀರ ಶ್ರಮ ಹಾಗೂ ಸರ್ವೋದಯ ಕಲ್ಪನೆ ಗ್ರಾಮ ಅಭಿವೃದ್ಧಿಗೆ ಬೇಕಾದ ನೆಲೆಗಟ್ಟನ್ನು ಅವರಿಗೆ ಒದಗಿಸಿದವು. ಈ ಚಿಂತನೆಯ ಫಲವಾಗಿಯೇ 1958 ರಲ್ಲಿ ಕೊಲಂಬೋದ ನಲಂದ ವಿದ್ಯಾಲಯದ 40 ವಿದ್ಯಾರ್ಥಿಗಳು ಮತ್ತು 12 ಶಿಕ್ಷಕರು ಅರಿಯರತ್ನೆ ಯವರ ಮಾರ್ಗದರ್ಶನದಲ್ಲಿ ಅತಿ ಹಿಂದುಳಿದ ಹಳ್ಳಿಯೊಂದರಲ್ಲಿ ಒಂದು ತಿಂಗಳು ಶ್ರಮದಾನ ನಡೆಸಿದರು ಅಲ್ಲಿನ ಬಡ ಸಮುದಾಯವನ್ನು ಸಂಘಟಿಸಿ ಅವರ ಬದುಕು ಸ್ವಾವಲಂಬಿಯಾಗುವಂತೆ ಮಾಡಿದರು.

ಈ ಪ್ರಯೋಗಗಳು ಬುದ್ಧ – ಗಾಂಧಿ ತತ್ವ ಪ್ರಣೀತ ಸರ್ವೋದಯ ಸಮುದಾಯ ಚಳುವಳಿಯ ಸ್ವರೂಪದಲ್ಲಿ ಇತರೆಡೆಗೂ ವಿಸ್ತರಿಸಿತು. ಸಮುದಾಯ ಮತ್ತು ಗ್ರಾಮೀಣ ಆಯಾಮಗಳನ್ನು, ತನ್ನೊಂದಿಗೆ ಜನಗಳನ್ನು ತೊಡಗಿಸಿಕೊಳ್ಳುತ್ತಿರುವ ಈ ಚಳುವಳಿ ಶ್ರೀಲಂಕಾದಲ್ಲಿನ 15000 ಹಳ್ಳಿಗಳಲ್ಲಿ ಕ್ರಿಯಾಶೀಲವಾಗಿದೆ . ದ್ವೀಪದಲ್ಲಿನ ಎಲ್ಲ 38000 ಹಳ್ಳಿಗಳಲ್ಲೂ ಈ ತತ್ವ ಆಧಾರಿತ ಅಭಿವೃದ್ಧಿ ಕಾರ್ಯಕ್ರಮಗಳು ವಿಸ್ತರಿತವಾಗಿವೆ . ಗಾಂಧೀಜಿ ಅವರ ಆದರ್ಶಗಳಾದ ಅಹಿಂಸೆ,ಗ್ರಾಮಾಭಿವೃದ್ಧಿ, ನಿಸ್ವಾರ್ಥ ಸೇವೆ, ತ್ಯಾಗ ಹಾಗೂ ಬುದ್ಧನ ಕರುಣೆ ಮತ್ತು ಕ್ರಿಸ್ತನ ಪ್ರೀತಿ ತಮ್ಮ ರಚನಾತ್ಮಕ ಕಾರ್ಯಕ್ರಮದ ಮಾರ್ಗದರ್ಶನ ಸೂತ್ರಗಳು ಎನ್ನುತ್ತಾರೆ ಅರಿಯರತ್ನೆ.

ಸರ್ವೋದಯದ ಮೂಲ ಕಲ್ಪನೆ ಎಲ್ಲರ ಕಲ್ಯಾಣ. ಆದರೆ ಅರಿಯರತ್ನೆ ಇದನ್ನು ಬುದ್ಧನ ಮಾರ್ಗದಲ್ಲಿನ ಎಲ್ಲರ ಜಾಗೃತಿ ಎಂದು ಅರ್ಥೈಸಿದ್ದಾರೆ. ಮಾನವ – ಎಲ್ಲ ಸಾಮಾಜಿಕ ಬದಲಾವಣೆಗಳ ಕೇಂದ್ರಬಿಂದು .ಗ್ರಾಮಗಳು ಒಂದು ದೇಶದ ಹೃದಯವಿದ್ದಂತೆ . ನೈತಿಕ ಅಧ್ಯಾತ್ಮಿಕ ಮಾನವೀಯ ನೆಲಗಟ್ಟಿನ ಮೇಲೆ ನಿರ್ಮಿತವಾದ ಅಭಿವೃದ್ಧಿ ಮಾತ್ರ ತನ್ನ ನಿರಂತರತೆಯನ್ನು ಕಾಯ್ದುಕೊಳ್ಳಬಹುದು ಎನ್ನುತ್ತಾರೆ ಆರಿಯರತ್ನೆ. ಬೌದ್ಧ ಧರ್ಮದ ಆಧಾರ ಸ್ತಂಭಗಳಾದ ಅಹಿಂಸೆ,ನಶ್ವರತೆ ನಿಸ್ವಾರ್ಥತೆ, ಸತ್ಯ,ದುಃಖ ಮೂಲದ ಅರಿವು ಹಾಗೂ ಅದರಿಂದ ಬಿಡುಗಡೆ ಮತ್ತು ಅಷ್ಟಾಂಗ ಮಾರ್ಗಗಳ ಮೂಲಕ ಪಡೆಯಬಹುದಾದ ವೈಯಕ್ತಿಕ ಹಾಗೂ ಸಾಮಾಜಿಕ ಜಾಗೃತಿ -- ಇವು ವ್ಯಕ್ತಿ ಹಾಗೂ ಸಮಾಜವನ್ನು ಕಟ್ಟುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ದ್ವೇಶ, ದುರಾಸೆ ಮುಂತಾದ ನಕಾರಾತ್ಮಕ ಮನೋಭಾವನೆಗಳನ್ನು ಸಕಾರಾತ್ಮಕ ಸಾಮಾಜಿಕ ಗುಣಗಳನ್ನಾಗಿ ಧ್ಯಾನಕೇಂದ್ರಿತ ಶಿಕ್ಷಣದಿಂದ ಪರಿವರ್ತಿಸಬಹುದಾಗಿದೆ ಎಂಬುದು ಅವರ ನಿಲುವು. ಮನೋಭಾವಗಳ ಹೊಂದಾಣಿಕೆಯು ಯಾವುದೇ






ಅಭಿವೃದ್ಧಿಯಲ್ಲಿ ಮಹತ್ವದ ಪಾತ್ರ ವಹಿಸುತ್ತದೆ ಎಂಬುದು ಅವರ ಅನುಭವ ಜನ್ಯ ಸತ್ಯ.

ನಶ್ವರತೆಯಿಂದಲೇ ಬದುಕು ಸುಂದರವಾಗಿದೆ. ಪ್ರತಿಯೊಬ್ಬರೂ ಇನ್ನೊಬ್ಬರ ಮೇಲೆ ಅವಲಂಬಿತವಾಗಿರುವುದರಿಂದ ಎಲ್ಲವನ್ನು ಎಲ್ಲರನ್ನೂ ಗೌರವಿಸಬೇಕಾಗುತ್ತದೆ. ಎಲ್ಲರೂ ಎಲ್ಲರ ಕಷ್ಟ ಸುಖಗಳಲ್ಲಿ ಭಾಗಿಯಾಗಬೇಕಾಗುತ್ತದೆ. ಶ್ರಮದಾನದ ಮೂಲಕ ಸ್ವಯಂ ಸೇವೆ ಸಲ್ಲಿಸುವಾಗ ನಮ್ಮ ಅಹಂಭಾವ ಕಡಿಮೆಯಾಗುತ್ತದೆ. ಅಹಂಕಾರ ಕಡಿಮೆಯಾದಷ್ಟು ಕೊಡುವ ಕೊಳ್ಳುವ ಸಂಬಂಧ ಬಲಗೊಳ್ಳುತ್ತದೆ. ಇದು ಮಾನವೀಯ ಸಂಬಂಧಗಳ ಸೇತುವೆ ನಿರ್ಮಿಸುತ್ತದೆ. ಶ್ರಮ , ದಾನದ ಮೂಲ ಮಂತ್ರವಾಗಿದೆ .ಇದು ಬುದ್ಧನ ಮತ್ತೊಂದು ತತ್ವವಾದ ಸ್ವಾರ್ಥ ರಹಿತ ಸೇವೆ, ಸರ್ವೋದಯ ಶ್ರಮದಾನದ ಮೂಲ ಮಂತ್ರವಾಗಿದೆ.

ಬೋಧಿಸತ್ವನ ನಾಲ್ಕು ಘನ ಸತ್ಯಗಳ ಸಾಮಾಜಿಕ ಅಳವಡಿಕೆಗಳನ್ನು ಶ್ರೀ ಅರಿಯ ರತ್ನೆ ಹೀಗೆ ಅರ್ಥೈಸಿದ್ದಾರೆ.ಜೀವನದ ಅವಿಭಾಜ್ಯ ಅಂಗವಾದ ಯಾತನೆ ವಿಶ್ವದ ಎಲ್ಲ ರಾಷ್ಟ್ರಗಳಿಗೂ ವ್ಯಾಪಿಸಿದೆ ಎಂಬ ಅರಿವಿರಬೇಕು. ಗ್ರಾಮೀಣರು ತಮ್ಮ ಪರಿಸರದಲ್ಲಿನ ಬಡತನ ಅನಾರೋಗ್ಯ ಶೋಷಣೆ ಅನೈಕ್ಯತೆಯನ್ನು ಅರ್ಥ ಮಾಡಿಕೊಂಡು ಅದರ ಪರಿಹಾರ ಮಾರ್ಗಗಳು ತಮ್ಮಲ್ಲಿಯೇ ಇವೆ ಎಂಬುದನ್ನು ಶೋಧಿಸಬೇಕು. ಬಡತನ ಸಿರಿತನ ಒಂದೇ ಕಡೆ ಕೇಂದ್ರೀಕೃತವಾಗಬಾರದು. ಇದು ಮೊದಲ ಸತ್ಯ .ಈ ಯಾತನೆಯ ಮೂಲದ ಅರಿವು ಮತ್ತೊಂದು ಸತ್ಯ. ವ್ಯಕ್ತಿ ಮತ್ತು ಸಮಾಜದಲ್ಲಿನ ಸ್ವಾರ್ಥ, ಸ್ಪರ್ಧೆ, ದುರಾಸೆ ಮತ್ತು ದ್ವೇಷ ಈ ಯಾತನೆಯ ಮೂಲ ಕಾರಣಗಳು. ತೃತೀಯ ಸತ್ಯ ನಿರ್ವಾಣ ಅಥವಾ ಮುಕ್ತಿ. ಅಂದರೆ ಯಾತನೆಗಳಿಂದ ಮುಕ್ತಿ ಮತ್ತು ಸಮಾಜದ ಮುಕ್ತಿ. ಪರಸ್ಪರ ಸಹಾಯ ಸಹಕಾರಗಳಿಂದ ಬದುಕನ್ನು ಕಟ್ಟಿಕೊಳ್ಳಬೇಕೆಂಬುದನ್ನು ಸರ್ವೋದಯ ಸಮುದಾಯ ಚಳವಳಿ ಕಲಿಸಿ ಕೊಡುತ್ತದೆ.

ನಾಲ್ಕನೇ ಸತ್ಯ ಈ ಎಲ್ಲ ಯಾತನೆಗಳಿಗೆ ಪರಿಹಾರ ಸೂಚಿಸುವ ಕ್ರಿಯೆ ಅಷ್ಟಾಂಗ ಮಾರ್ಗ. ಸರಿಯಾದ ಆಶಯ, ಸರಿಯಾದ ಮಾತು,ಸರಿಯಾದ ಕ್ರಿಯೆ, ಸರಿಯಾದ ಮನಸ್ಸು, ಸರಿಯಾದ ಪ್ರಯತ್ನ ಹಾಗೂ ಸರಿಯಾದ ಏಕಾಗ್ರತೆ ಸಮುದಾಯದ ಅಭಿವೃದ್ಧಿಗೆ ಅಗತ್ಯ ಮಾರ್ಗಸೂಚಿಗಳಾಗಿವೆ.

**ಜಾಗತಿಕ ಆರ್ಥಿಕ ಸ್ಥಿತಿ-ಗತಿಗಳ ಬಗ್ಗೆ ಅರಿಯರತ್ನೆ ಹೀಗೆನ್ನುತ್ತಾರೆ.**

ಮನುಷ್ಯ ಸವಾರಿ ಮಾಡಬಲ್ಲ ಆರ್ಥಿಕ ವಿಧಿ- ವಿಧಾನಗಳ, ಸಂಸ್ಥೆಗಳ, ಜಾಗದಲ್ಲಿ ಅವನ ಮೇಲೆಯೇ ಸವಾರಿ ಮಾಡಬಲ್ಲ, ಪಾಶ್ಚಿಮಾತ್ಯ ಅರ್ಥ ವ್ಯವಸ್ಥೆ ಒಟ್ಟಾರೆ ನಮ್ಮ ಜೀವನವನ್ನು ಮತ್ತು ಜೀವನದ ಮೌಲ್ಯಗಳನ್ನು ಈ ದುಸ್ಥಿತಿಗೆ ತಂದು ನಿಲ್ಲಿಸಿವೆ.



ಆಧ್ಯಾತ್ಮಿಕ, ನೈತಿಕ ,ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಜಾಗೃತಿಯೇ ಸರ್ವೋದಯದ





2016 ಫೆಬ್ರವರಿಯಲ್ಲಿ ಗೊಟ್ಟಿಗೆರೆಯಲ್ಲಿನ ಶ್ರೀರಾಮಕೃಷ್ಣ ಸಮಗ್ರ ಶಿಕ್ಷಣ ಕೇಂದ್ರದ ಬೆಳ್ಳಿ ಹಬ್ಬದ ಆಚರಣೆ ಸಂದರ್ಭದಲ್ಲಿ ಬೆಂಗಳೂರಿಗೆ ಬಂದಿದ್ದ ಸಂದರ್ಭ .

ಮೂಲಮಂತ್ರ ಎನ್ನುವುದು ಅವರ ಅರಿವಾಗಿತ್ತು .

ಶ್ರೀ ಅರಿಯರತ್ನೆ ಅವರು 1969ರಲ್ಲಿ ಸಮುದಾಯ ವಿಕಾಸ ಕಾರ್ಯಕ್ರಮಗಳಿಗಾಗಿ ಮ್ಯಾಗ್ಸೆಸೇ ಪ್ರಶಸ್ತಿ ಪಡೆದರು . 1991ರಲ್ಲಿ ಪ್ರತಿಷ್ಠಿತ ಜಮುನಾಲಾಲ್ ಬಜಾಜ್ ಪ್ರಶಸ್ತಿ, 1996 ರಲ್ಲಿ ಭಾರತ ಸರ್ಕಾರದ ಗಾಂಧಿ ಶಾಂತಿ ಪ್ರಶಸ್ತಿ ,2006ರಲ್ಲಿ ಆಚಾರ್ಯ ಸುಶೀಲ್ ಕುಮಾರ್ ಅಂತರಾಷ್ಟ್ರೀಯ ಶಾಂತಿ ಪ್ರಶಸ್ತಿ 2007 ರಲ್ಲಿ ಶ್ರೀಲಂಕಾದ ಅತ್ಯಂತ ನಾಗರಿಕ ಗೌರವದ ಶ್ರೀಲಂಕಾ ಅಭಿಮಾನ್ಯ ಪ್ರಶಸ್ತಿ ಅವರನ್ನು ಹುಡುಕಿಕೊಂಡು ಬಂದವು.

2006ರಲ್ಲಿ ಗುಜರಾತ್ ವಿದ್ಯಾಪೀಠದಲ್ಲಿ ಅವರು ಮಾಡಿದ ಘಟಿಕೋತ್ಸವ ಭಾಷಣ ನಮ್ಮ ನೈಜ ಸಮಸ್ಯೆಗಳ ನಿರ್ವಹಣಾ ಸಾಮರ್ಥ್ಯ ಮುಂತಾದ ಅನೇಕ ಸಾಧ್ಯತೆಗಳನ್ನು ನಮ್ಮ ಮುಂದೆ ತೆರೆದಿಟ್ಟಿವೆ . ಭಾರತ ಉಪಖಂಡದಲ್ಲಿನ ಎಲ್ಲ ಸರ್ಕಾರಗಳು ತಮ್ಮ ಆಯವ್ಯಯದಲ್ಲಿನ ಸಾಮಾಜಿಕ ಸೇವೆಗಳ ಖರ್ಚಿನಲ್ಲಿ ಶಿಕ್ಷಣ ಮತ್ತು ಸ್ವಾಸ್ಥ್ಯಕ್ಕೆ ಅತಿ ಹೆಚ್ಚು ಹಣವನ್ನು ವಿನಿಯೋಗಿಸುತ್ತವೆ. ದುರದೃಷ್ಟವೆಂದರೆ ಈ ಎರಡು ಕ್ಷೇತ್ರಗಳಲ್ಲಿಯೇ ನಾಯಕತ್ವದ ಕೊರತೆ ಇದೆ. ಉದಾತ್ತ ಸೇವಾ ಭಾವನೆಯ ಆಸ್ಪತ್ರೆಗಳು ಇಂದು ಲಾಭ ತರುವ ಉದ್ಯಮಗಳಾಗಿವೆ . ನಮ್ಮ ಶೈಕ್ಷಣಿಕ ಸಿದ್ಧಾಂತಗಳ ಮತ್ತು ಸಂಸ್ಥೆಗಳ ಪ್ರವರ್ತಕರು ಗಾಂಧೀಜಿಯೋ ಗ್ರೆಂಟ್ ವಿಗ್ ನೋ, ರವೀಂದ್ರ ನಾಥ ಟ್ಯಾಗೋರ್ ಅಥವಾ ಅನಿಬೆಸೆಂಟ್ರೋ ಆಗಿರದೆ ಕಾಸು ಮಾಡುವ ದಂಧೆಯಲ್ಲಿ ನಿಷ್ಣಾತರಾದ ಶಿಕ್ಷಣ ವ್ಯಾಪಾರಿಗಳಾಗಿದ್ದಾರೆ. ಶಿಕ್ಷಣದಿಂದ ಹಣ ಮಾಡುವ ಈ ಉದ್ಯಮಿಗಳು ಹಣ ಮಾಡುವ ಶಿಕ್ಷಣವನ್ನು ಮಾತ್ರ ಕಲಿಸುತ್ತಾರೆ . ಅವರು ಮೌಲ್ಯ ಮತ್ತು ಚಾರಿತ್ರ್ಯ ನಿರ್ಮಾಣ ಮಾಡಲಾರರು. ಹಿತೋಪದೇಶದಲ್ಲಿನ ಸಂಸ್ಕೃತ ನೀತಿ ಸೂತ್ರವನ್ನು ಉದ್ಧರಿಸುತ್ತಾ ಅವರು ಹೀಗೆ ಹೇಳುತ್ತಾರೆ. ' ಭೂಮಿ ನಿಸ್ಸಾರವಾಗಿ ತನ್ನ ಔಷಧಿಯ ಗುಣಗಳನ್ನು ಕಳೆದುಕೊಂಡಿದೆ. ಆಡಳಿತಗಾರರು ಹಣದಾಹಿಗಳಾಗಿ ಕಾನೂನು ಕೈ ಬಿಡುತ್ತಾರೆ. ಧರ್ಮ ಗುರುಗಳು ಅನ್ಯಕರ್ಮ ನಿರತರಾಗುತ್ತಾರೆ. ಮಡದಿ, ಬಂಧು , ಪಿತ, ಪುತ್ರರುಗಳು ಪರಸ್ಪರ ದ್ವೇಷಿಗಳಾಗುತ್ತಾರೆ . ಹೀಗಾಗಿ ಕಲಿಕಾಲದಲ್ಲಿ ಧರ್ಮ ಕಾಡಿನ ಪಾಲಾಗುತ್ತದೆ '

ಹಿಂದೊಮ್ಮೆ ಮೌಲ್ಯಾಧಾರಿತ ಸಂಸ್ಕೃತಿ ಸಭ್ಯತೆ ಹಾಗೂ ನಾಗರೀಕತೆಯನ್ನು ಹೊಂದಿದ ದೇಶಗಳು ಈಗ ಅನುಭವಿಸುತ್ತಿರುವ ನೈಜ ಸಾಮಾಜಿಕ ಸಮಸ್ಯೆಗಳನ್ನು ಅವರು ಹೀಗೆ ಪಟ್ಟಿ ಮಾಡುತ್ತಾರೆ

- **ಪ್ರಕೃತಿ ಮತ್ತು ಜೀವನಾಧಾರ ಮೂಲಗಳ ಮಾಲಿನ್ಯ.**
- **ಸಮುದಾಯ ಮತ್ತು ರಾಷ್ಟ್ರೀಯ ನಾಯಕತ್ವದಲ್ಲಿರುವ ದಿವಾಳಿಕೋರತನ**
- **ಆಡಳಿತದಲ್ಲಿನ ಅದಕ್ಷತೆ , ಅಪ್ರಾಮಾಣಿಕತೆ, ಅವ್ಯವಸ್ಥೆ ಮತ್ತು ಅಪಾರದರ್ಶಕತೆ.**
- **ಧಾರ್ಮಿಕ ಗುರುಗಳಲ್ಲಿರುವ ಆಧ್ಯಾತ್ಮಿಕ ಕೊರತೆ**
- **ಕೌಟುಂಬಿಕ ಸಂಬಂಧಗಳಲ್ಲಿನ ಬಿರುಕುಗಳು .**
- **ವ್ಯಾಪಕ ಬಡತನ, ಅಪರಾಧ ಮತ್ತು ಯುದ್ಧ ಭೀತಿ .**
- **ಆಧ್ಯಾತ್ಮಿಕ ಮತ್ತು ಧರ್ಮ ಶ್ರದ್ಧೆಯಿಂದ ವಿಮುಖವಾಗುತ್ತಿರುವ ಸಮಾಜ .**
- ಗಾಂಧೀಜಿಯವರು ಪ್ರತಿಪಾದಿಸಿದ ಏಳು ಸಾಮಾಜಿಕ ಪಾತಕಗಳ ವಿರುದ್ಧ ಮತ್ತು 11 ವ್ರತಗಳ ನಮ್ರ ಅನುಷ್ಠಾನದ ಪರವಾಗಿ ಅವರೇ ಘೋಷಿಸಿರುವ ರಚನಾತ್ಮಕ ಕಾರ್ಯಕ್ರಮಗಳು ಮೇಲೆ ಹೇಳಲಾದ ಸಪ್ತ ಸಾಮಾಜಿಕ ಸಮಸ್ಯೆಗಳಿಗೆ ಪರಿಹಾರ ದೊರಕಿಸಬಹುದು ಎಂಬ ವಿಶ್ವಾಸವನ್ನು ಅರಿಯರತ್ನೆ ವ್ಯಕ್ತಪಡಿಸುತ್ತಾರೆ. ತನ್ನ ರಾಷ್ಟ್ರ ಜೀವನದ ಐವತ್ತು ವರ್ಷಗಳಿಗೂ ಹೆಚ್ಚು ಕಾಲ ಅಂತಃ ಕಲಹದಲ್ಲಿ ಬೆಂದು ನೊಂದ ನಮ್ಮ ಬಂಧು ದೇಶ ಶ್ರೀಲಂಕಾ ಈಗಷ್ಟೇ

ಚೇತರಿಸಿಕೊಂಡಿದ್ದು ಪ್ರಬಲ ಗಾಂಧಿವಾದಿ ಅರಿಯರತ್ನೇ ಅಲ್ಲಿನ ರಾಷ್ಟ್ರೀಯ ಪುನರ್ ನಿರ್ಮಾಣದ ದಾರಿದೀಪವಾಗಿ, ರಾಷ್ಟ್ರೀಯ ಅಸ್ಮಿತೆಯಾಗಿ, ಶ್ರೀಲಂಕಾದ ಸಾಕ್ಷಿ ಪ್ರಜ್ಞೆಯಾಗಿ ಬಾಳಿ ಬದುಕಿದವರು .

■

# ನನ್ನ ಕನಸಿನ ಭಾರತ

ಸಂಗ್ರಹ : ಎಲ್. ಸಿ.ನಾಗರಾಜ್





**ಹಿಂ**ದೂಸ್ಥಾನ ಎಂದರೆ ಇಲ್ಲಿಯೇ ಹುಟ್ಟಿ ಬೆಳೆದಿರುವ , ನಮ್ಮ ದೇಶ ಅಂತಾ ಬೇರೆ ಆಯ್ಕೆಯಿಲ್ಲದ ಎಲ್ಲರಿಗೂ ಸೇರಿದೆ. ಆದ್ದರಿಂದ ಹಿಂದೂಸ್ಥಾನ ಹೇಗೆ ಹಿಂದೂಗಳಿಗೆ ಸೇರಿದೆಯೋ ಹಾಗೇ ಪಾರ್ಸಿ , ಯಹೂದಿ , ಭಾರತೀಯ ಕ್ರೈಸ್ತರು , ಮುಸಲ್ಮಾನರು ಈ ಎಲ್ಲ ಹಿಂದೂಯೇತರ ನಾಗರೀಕರಿಗೂ ಸೇರಿದೆ. ಸ್ವತಂತ್ರ ಭಾರತ / ಇಂಡಿಯಾ ಹಿಂದೂ ದೇಶವಾಗಿರುವುದಿಲ್ಲ , ಅದು ಯಾವುದೇ ಜನಾಂಗ ಧರ್ಮಾಧಾರಿತ , ಬಹುಸಂಖ್ಯಾತ ಆಧಾರಿತ ದೇಶವಾಗಿರದೇ , ಯಾವುದೇ ಧರ್ಮದ ಅರ್ಹತೆಯ ಬದಲಿಗೆ ಜನಪ್ರಾತಿನಿಧ್ಯವನ್ನ ಮಾತ್ರ ಆಧರಿಸಿದ ಭಾರತ ದೇಶವಾಗಿರುತ್ತದೆ ; ವಿವಿಧ ಧರ್ಮಗಳ ಮಿಶ್ರತೆಗೆ ಹೋಲಿಕೆ ಮಾಡಿದರೆ ಹಿಂದೂಗಳು ಇಲ್ಲಿ ಅಲ್ಪಸಂಖ್ಯಾತರಾಗುತ್ತಾರೆ ಎಂಬ ಗ್ರಹಿಕೆ ನನಗಿದೆ. ಅವರು ಅವರ ಅರ್ಹತೆ ಆಧಾರದಿಂದ ಮಾತ್ರ ಜನಪ್ರತಿನಿಧಿ ಸಭೆಗೆ ಆಯ್ಕೆಯಾಗುತ್ತಾರೆ . ಧಾರ್ಮಿಕತೆ ಮನುಷ್ಯರ ಖಾಸಗಿ ವಿಷಯವಾಗಿದ್ದು ಅದಕ್ಕೆ ರಾಜಕೀಯ ವಿದ್ಯಾಮಾನಗಳಲ್ಲಿ ಯಾವುದೇ ಸ್ಥಾನ ಇರುವುದಿಲ್ಲ .

ನನ್ನ ಕನಸಿನ ಭಾರತ ಸಂಪೂರ್ಣ ಹಿಂದೂ , ಸಂಪೂರ್ಣ ಕ್ರೈಸ್ತ ಅಥವಾ ಸಂಪೂರ್ಣ ಮುಸಲ್ಮಾನ ದೇಶವಾಗಿ ಬೆಳೆಯುವುದನ್ನ ನಾನು ನಿರೀಕ್ಷಿಸಿಲ್ಲ , ಆದರೆ ಅದು ಎಲ್ಲ ಧರ್ಮಗಳೂ ಜೊತೆಯಾಗಿ ಕಾರ್ಯ ನಿರ್ವಹಿಸುವ ಸಹಿಷ್ಣು ದೇಶವಾಗಿಯೇ ಬಾಳಬೇಕೆಂದು ಬಯಸಿದ್ದೇನೆ .

ನಾನು ನನ್ನ ಧರ್ಮದ ಹೆಸರಿನಲ್ಲಿ ಪ್ರಮಾಣ ಮಾಡುತ್ತೇನೆ , ಇದಕ್ಕಾಗಿ ಸಾಯುತ್ತೇನೆ ; ಇದು ನನ್ನ ಖಾಸಗಿ ವಿಷಯ ಮಾತ್ರ . ದೇಶಕ್ಕೂ ನನ್ನ ವೈಯಕ್ತಿಕ ಧಾರ್ಮಿಕತೆಗೂ ಯಾವುದೇ ಬಗೆಯ ಸಂಬಂಧವಿಲ್ಲ .ದೇಶ / ರಾಜ್ಯ / ಸರ್ಕಾರ ಧರ್ಮಾತೀತವಾಗಿ ನಿಮ್ಮ ಕಲ್ಯಾಣದ ಬಗ್ಗೆ ಮಾತ್ರ ನಿಗಾ ವಹಿಸಬೇಕೇ ಹೊರತು ನನ್ನ ನಿಮ್ಮ ಧರ್ಮಗಳನ್ನಲ್ಲ ; ಧಾರ್ಮಿಕತೆ ಆಯಾ ಧರ್ಮೀಯರ ಖಾಸಗಿ ವಿಷಯ .

ದೇಶ / ಸರ್ಕಾರಕ್ಕೆ ಧಾರ್ಮಿಕ ಶಿಕ್ಷಣದ ಉಸಾಬರಿ ಇರಲೇಬಾರದು . ಧರ್ಮ ಎಂದರೆ ಮನುಷ್ಯರಿಗೆ ಇರಬೇಕಾದ ನೈತಿಕ ಮೌಲ್ಯಗಳು ಎಂಬ ಅರ್ಥದಲ್ಲಿ ನಾನು ಇದನ್ನ ಹೇಳುತ್ತಿಲ್ಲ . ಆದರೆ ಆಯಾ ಧಾರ್ಮಿಕ ಪಂಥಗಳು ಎಂದಷ್ಟೇ ಸೂಚಿಸುತ್ತಿದ್ದೇನೆ . ಸರ್ಕಾರಿ ಅನುದಾನಿತ ಧರ್ಮದಿಂದ ನಾವು ತುಂಬಾ ಕಷ್ಟ ಕಾರ್ಪಣ್ಯಗಳನ್ನ ಅನುಭವಿಸಿದ್ದೇವೆ. ತನ್ನ ಅಸ್ತಿತ್ವಕ್ಕಾಗಿ ಸರ್ಕಾರಿ ಅನುದಾನವನ್ನ ಅವಲಂಬಿಸಿರುವ ಯಾವುದೇ ಸಮಾಜ , ಸಮೂಹ ತಾನೊಂದು ಧರ್ಮ ಎನಿಸಿಕೊಳ್ಳಲು ಅರ್ಹವಲ್ಲ .

**– ಮೋಹನದಾಸ್ ಕರಮಚಂದ ಗಾಂಧಿ,**
ಸಂಕಲಿತ ಕೃತಿಗಳು ; 1947 ರ ಪುಟಗಳು

**H**industan belongs to all those who are born and bred here and who have no other country to look to. Therefore, it belongs to Parsis, Beni Israelis, to Indian Christians, Muslims and other non-Hindus as much as to Hindus. Free India will be no Hindu raj, it will be Indian raj based not on the majority of any religious sect or community, but on the representatives of the whole people without distinction of religion. I can conceive of a mixed majority putting the Hindus in a minority. They would be elected for their record of service and merits. Religion is a personal matter, which should have no place in politics.

I do not expect India of my dreams to develop one religion that is to be wholly Hindu or wholly Christian or wholly Mussalman, but I want it to be wholly tolerant, with its religions working side by side with one another.

I swear by my religion. I will die for it. But it is my personal affair. The State has nothing to do with it. The State would look after your secular welfare, but not your or my religion. That is everybody's personal concern.

I do not believe that the state can concern itself or cope with religious education. By religion I have not in mind fundamental ethics, but what goes by the name of denominationalism. We have suffered enough from State-aided religion and a State Church. A society or a group, which depends partly or wholly on state aid for the existence of its religion does not deserve or better still, does not have any religion worth the name.

- Complete works M. K Gandhi
(pages from 1947)

# ಗಾಂಧಿ ಮತ್ತು ಕರ್ನಾಟಕ

ಭಾಗ – 12

ಗಾಂಧಿ ಮತ್ತು ಕರ್ನಾಟಕದ ನಡುವೆ ಒಂದು ಮಧುರ ಸಂಬಂಧವಿದೆ. ಕರ್ನಾಟಕದ ಜೊತೆಗಿನ ಗಾಂಧೀಜಿಯವರ ಒಡನಾಟ ಮತ್ತು ಸಂಬಂಧವನ್ನು ಇತ್ತೀಚಿನ ಪೀಳಿಗೆಯ ಓದುಗರಿಗೆ ತಲುಪಿಸುವ ಉದ್ದೇಶ ನಮ್ಮದು. ಅದಕ್ಕಾಗಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಸಂಸ್ಥೆಯ ಪ್ರಕಟಣೆಯಾದ **"ಗಾಂಧಿ ಮತ್ತು ಕರ್ನಾಟಕ"** ಕೃತಿಯನ್ನು ಸರಣಿ ಮಾದರಿಯಲ್ಲಿ ಪ್ರತಿ ತಿಂಗಳು ಬಾಪು ಪ್ರಪಂಚ ಪತ್ರಿಕೆಯಲ್ಲಿ ಪ್ರಕಟಿಸುತ್ತಿದ್ದೇವೆ.

ಭಾರತದ ಸ್ವಾತಂತ್ರ್ಯ ಚಳವಳಿಗೆ ಕರ್ನಾಟಕದ ಕೊಡುಗೆ ಅಪಾರವಾದುದು,ಅದರಲ್ಲಿಯೂ ವಿದುರಾಶ್ವಥ ದುರಂತ, ಶಿವಪುರ ಧ್ವಜ ಸತ್ಯಾಗ್ರಹ ಹಾಗೂ 1982ರ ನಂತರದ (ಮೈಸೂರು ಚಲೋ ಚಳವಳಿಗಳು) ಕರ್ನಾಟಕದ ಕೊಡುಗೆಯೆಂದೆ ಭಾವಿಸುವ ಮಹತ್ವಪೂರ್ಣ ಘಟನೆಗಳಾಗಿ ಇತಿಹಾಸದಲ್ಲಿ ದಾಖಲಾಗಿವೆ . ಅದಲ್ಲದೆ ಗಾಂಧೀಜಿಯವರು ವಿಶ್ರಾಂತಿಗಾಗಿ ಕರ್ನಾಟಕದ ನಂದಿ ಗಿರಿಧಾಮವನ್ನು ಆಯ್ಕೆ ಮಾಡಿಕೊಂಡಿದ್ದು ಕರ್ನಾಟಕದ ಸುದೈವ. ಅಲ್ಲಿ ಅವರ ಆರೋಗ್ಯ ಸುಧಾರಿಸಿದ್ದು. ಗಾಂಧೀಜಿಯವರು ಕರ್ನಾಟಕಕ್ಕೆ 1915ರಿಂದ 1937ರ ಅವಧಿಯಲ್ಲಿ 19 ಸಲ ಆಗಮಿಸಿದ್ದಾರೆ. ಅವರು ಅಸಹಕಾರ ಆಂದೋಲನಕ್ಕಾಗಿ, ಖಾದಿ ಸ್ವದೇಶಿ ಆಂದೋಲನಕ್ಕಾಗಿ, ಕಾಂಗ್ರೆಸ್ ಅಧಿವೇಶನಕ್ಕಾಗಿ, ನಿಧಿ ಸಂಗ್ರಹಕ್ಕಾಗಿ, ಖಾದಿ ಪ್ರಚಾರಕ್ಕಾಗಿ, ಹರಿಜನ ನಿಧಿ ಸಂಗ್ರಹಕ್ಕಾಗಿ, ಹುದಲಿ ಸಮ್ಮೇಳನಕ್ಕಾಗಿ ಕರ್ನಾಟಕದ ನಾನಾ ಭಾಗಗಳಲ್ಲಿ ಪ್ರವಾಸ ಕೈಗೊಂಡಿದ್ದಾರೆ. ಈ ಎಲ್ಲಾ ದಾಖಲೆಗಳನ್ನು ಗಾಂಧೀಜಿಯವರೇ ಸ್ವತಃ ತಮ್ಮ ' ಹರಿಜನ ' ಮತ್ತು ' ಯಂಗ್ ಇಂಡಿಯಾ ' ಪತ್ರಿಕೆಗಳಲ್ಲಿ 1924, 1927, 1936, ಹಾಗೂ 1937ರ ಅವಧಿಯಲ್ಲಿ ಪ್ರಕಟಿಸಿದ್ದಾರೆ.

ಈ ಸಮಗ್ರ ದಾಖಲೆಗಳು ' ಗಾಂಧೀ ಮತ್ತು ಕರ್ನಾಟಕ ' ಕೃತಿಯಲ್ಲಿ ದಾಖಲಾಗಿವೆ. ಹಾಗೂ ಕರ್ನಾಟಕದ ಅಂದಿನ ಮುಂಚೂಣಿ ನಾಯಕರ ಪತ್ರ ವ್ಯವಹಾರಗಳು ಅಂದಿನ ಛಾಯಾಚಿತ್ರಗಳು ಸಹ ದಾಖಲಾಗಿವೆ. ಅಂದಿನ ಸ್ವಾತಂತ್ರ್ಯ ಹೋರಾಟಗಾರರ ನೆನಪುಗಳು ಕೂಡಾ ಈ ಕೃತಿಯಲ್ಲಿ ಸೇರ್ಪಡೆಯಾಗಿವೆ. ಅಲ್ಲದೆ ಕರ್ನಾಟಕಕ್ಕೆ ಗಾಂಧೀಜಿಯವರು ಬಂದಿದ್ದ ಹಾಗೂ ನಡೆದ ಘಟನೆಗಳ ಅವಲೋಕನವನ್ನು ಸ್ವಾತಂತ್ರ್ಯ ಹೋರಾಟಗಾರರು ತಮ್ಮ ನೆನಪಿನ ಬುತ್ತಿಯಿಂದ ತೆಗೆದಿಟ್ಟಿದ್ದಾರೆ. ಅವುಗಳೆಲ್ಲವನ್ನೂ ಸಿದ್ದವನಹಳ್ಳಿ ಕೃಷ್ಣಶರ್ಮರ ಮುಂದಾಳತ್ವದಲ್ಲಿ ಅಂದಿನ ಸಂಗ್ರಹಕಾರರು ಸಂಗ್ರಹಿಸಿದ್ದಾರೆ. ಕರ್ನಾಟಕದ 44 ಮಹನೀಯರು ತಮ್ಮ ನೆನಪುಗಳ ಬುತ್ತಿಯಿಂದ ಗಾಂಧೀಜಿಯವರ ಕರ್ನಾಟಕದ ಭೇಟಿಯಲ್ಲಿ ನಡೆದ ಘಟನೆಗಳನ್ನು ಸವಿಸ್ತಾರವಾಗಿ ದಾಖಲಿಸಲು ನೆರವಾಗಿದ್ದಾರೆ. ಅವರ ಮಾತುಗಳು ಇಂದಿಗೂ ಈ ಕೃತಿಯನ್ನು ಓದುವಾಗ ಒಂದು ಚಿತ್ರಣವನ್ನು ಓದುಗರ ಸ್ಮೃತಿಪಟಲದಲ್ಲಿ ಮೂಡಿಸುತ್ತವೆ.



**ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷೀಯ ಲಿಖಿತ ಭಾಷಣ – (ಗಾಂಧೀಜಿ) ಪೂರ್ಣಪಾಠ.**

ಬೆಳಗಾಂವಿಯಲ್ಲಿ ನಡೆದದ್ದು 39ನೆಯ ಅಧಿವೇಶನ. ಭಾರತದ ಸ್ವರಾಜ್ಯ ಸಂಗ್ರಾಮದಲ್ಲಿ ಶಾಸನಸಭಾ ಪ್ರವೇಶದ ಒಂದು ಘಟ್ಟ. ಗಾಂಧೀಜಿ ತಮ್ಮ ಅಧ್ಯಕ್ಷ ಭಾಷಣದಲ್ಲಿ ಅದನ್ನು ತಿಳಿಸಿದರು. ಅವರ ಅಧ್ಯಕ್ಷ ಭಾಷಣ ಕೆಳಗಿನಂತೆ ಇತ್ತು.

"ಗೆಳೆಯರೆ, ನನ್ನ ಹೆಗಲ ಮೇಲೆ ಗೌರವದ ಬಹಳ ದೊಡ್ಡಭಾರ ಹೊರಿಸಿದ್ದೀರಿ . ಇವತ್ತು ಈ ಭಾರವನ್ನು ಒಪ್ಪಿಕೊಳ್ಳುವ ಮೊದಲು ನಾನು ಬಹಳ ಮೀನ–ಮೇಷ ಮಾಡಿದೆ. ಈ ವರ್ಷದ ಈ ವಿಶಿಷ್ಟ ಗೌರವ. ಶ್ರೀಮತಿ ಸರೋಜಿನಿ ನಾಯ್ಡುಗೆ ಹೋಗಬೇಕಾಗಿತ್ತು. ಕೆನ್ಯಾದಲ್ಲಿಯೂ, ದಕ್ಷಿಣ ಆಫ್ರಿಕಾದಲ್ಲಿಯೂ ಎಂಥ ಅದ್ಭುತ ಕೆಲಸ ಮಾಡಿದ್ದಾಳೆ ಆಕೆ! ಆದರೆ ಪರಿಸ್ಥಿತಿ ಹಾಗಾಗುವಂತಿರಲಿಲ್ಲ. ಆಂತರಿಕ ಪರಿಸ್ಥಿತಿಯೂ ಹೊರಗಿನ ಸನ್ನಿವೇಶವೂ ನಾನು ಪ್ರಭಾರವನ್ನು ಒಪ್ಪಿಕೊಳ್ಳುವಂತೆ ಮಾಡಿದೆ. ಈ ಉನ್ನತ ಸ್ಥಾನಕ್ಕೆ ತಕ್ಕರೀತಿಯಲ್ಲಿ ನಡೆದುಕೊಳ್ಳಲು ನಾನು ಮಾಡುವ ಪ್ರಯತ್ನದಲ್ಲಿ ತಮ್ಮ ಬೆಂಬಲ ಸಹ ನನಗೆ ಎಂದು ಗೊತ್ತು.

ಪ್ರಾರಂಭದಲ್ಲಿ, ಈ ವರ್ಷ ತೀರಿಕೊಂಡ ಬಿ.ಎಂ ಸರ್. ಅಶುತೋಷ್ ಮುಖರ್ಜಿ, ಶ್ರೀ ಭೂಪೇಂದನಾಥ ಬಸು, ಡಾ|| ಸುಬ್ರಹ್ಮಣ್ಯ ಐಯ್ಯರ್, ಶ್ರೀ ನಾ ಗಿರಿ, ಇವರ ಬಗ್ಗೆ ಗೌರವಪೂರ್ವಕವಾಗಿ ನನ್ನ ವಿಷಾದವನ್ನು ಸೂಚಿಸುತ್ತೇನೆ . ದಕ್ಷಿಣ ಆಫ್ರಿಕಾದಲ್ಲಿ ಸರ್ವಶ್ರೀ ರುಸ್ತುಮಜೀ . ಎಚ್ ಕೆ ನಾಯ್ಡು ಇವರಿಬ್ಬರೂ ಗತಿಸಿದ್ದಾರೆ. ಅವರ ಕುಟುಂಬಗಳಿಗೆ ನಿಮ್ಮ ಹೆಸರಿನಲ್ಲಿ ನನ್ನ ಗೌರವಪೂರ್ಣ ಸಂತಾಪವನ್ನು ಸಲ್ಲಿಸುತ್ತೇನೆ .

1920ರ ಸೆಪ್ಟೆಂಬರ್ ನಿಂದಲೂ ಆಂತರಿಕ ಶಕ್ತಿಯನ್ನು ಬೆಳೆಸಿಕೊಳ್ಳುವ ಸಂಸ್ಥೆ ಮುಖ್ಯವಾಗಿ ಕಾಂಗ್ರೆಸ್ ಆಗಿದೆ. ನಮಗೆ ಇರುವ ಕುಂದು ಕೊರತೆಗಳನ್ನು ಪರಿಹರಿಸಲು ಸರಕಾರಕ್ಕೆ ತಿಳಿಸುವ ತೀರ್ಮಾನಗಳನ್ನು ಮಾಡಿ ಕೆಲಸ ಮಾಡುವವರನ್ನು ಕೈಬಿಟ್ಟಿದೆ. ಈಗಿನ ಸರಕಾರದಿಂದ ಲಾಭ ಆದೀತು ಎಂಬ ನಂಬಿಕೆ ಹೋಗಿರುವದೇ ಅದಕ್ಕೆ ಕಾರಣ. ಈ ರಾಜ್ಯ ಪದ್ಧತಿಯು ನಡೆಯಲು: ಕಾರಣ, ತಿಳಿದೋ ತಿಳಿಯದೆಯೋ, ಇಷ್ಟಪಟ್ಟೋ ಅಥವಾ ಬಲಾತ್ಕಾರವಾಗಿಯೋ ನಮ್ಮ ಜನರು ಸರಕಾರಕ್ಕೆ ಕೊಡುತ್ತಿರುವ ಸಹಕಾರವೇ ಎಂಬುದು ಕೂಡ ಅಭಯ ! ಈ ಪದ್ಧತಿಯನ್ನು ತಿದ್ದಬೇಕೋ ಅಥವಾ ನಾಶಮಾಡಬೇಕೋ ಎಂಬ ದೃಷ್ಟಿಯಿಂದ ಈ ಸ್ವಯಂ ಸಹಕಾರಕ್ಕೆ ಮೇಲ್ಮಟ್ಟದಿಂದ ಅಂದರೆ ಶಾಸನಸಭೆಯಿಂದ ಮೊದಲು ನಿರಾಕರಿಸುತ್ತ ಬರಬೇಕು ಎಂದು ತೀರ್ಮಾನವಾಯಿತು. ಕಲ್ಕತ್ತೆಯ ವಿಶೇಷ ಅಧಿವೇಶನ 1920ರಲ್ಲಿ ನಡೆದಾಗ, ಸರಕಾರ ಕೊಟ್ಟ ಬಿರುದು, ಸರಕಾರದ ನ್ಯಾಯಾಲಯ, ಸರಕಾರದ ಶಿಕ್ಷಣ ಸಂಸ್ಥೆ, ಶಾಸನಸಭೆಗಳು, ಪರದೇಶೀ ವಸ್ತ್ರ ಇವೇ ಮೊದಲಾದವನ್ನು ಬಹಿಷ್ಕರಿಸಬೇಕು ಎಂದು ತೀರ್ಮಾನವಾಯಿತು. ಈ ಬಹಿಷ್ಕಾರದ ಕಾರ್ಯಕ್ರಮವನ್ನು ಅದಕ್ಕೆ ಸಂಬಂಧಪಟ್ಟವರು ಕೈಗೆ ತೆಗೆದುಕೊಂಡರು ಯಾರು ಈ ಕಾರ್ಯಕ್ರಮಕ್ಕೆ ಇಷ್ಟಪಡಲಿಲ್ಲವೋ, ಅಥವಾ ಅದನ್ನು ನಡೆಸಲು ಯಾರಿಗೆ ಸಾಧ್ಯವಿಲ್ಲವೋ ಅಂಥವರು ಕಾಂಗ್ರೆಸ್ ನಿಂದ ಹೊರಗೆ ಹೋದರು. ಅಸಹಕಾರದ ಈ ಚಳವಳಿಯು ಬಹಳ ಕುಂಠಿತವಾಗಿ ಡೊಂಕು ಡೊಂಕಾಗಿ ನಡೆಯಿತು. ಅದೆಲ್ಲವನ್ನೂ ಈಗ ನಾನು ಹೇಳುವುದಿಲ್ಲ. ಯಾವ ಒಂದು ಬಹಿಷ್ಕಾರವೂ ಪೂರ್ಣ ಗತಿಯನ್ನು ಮುಟ್ಟದಿದ್ದರೂ ಯಾವ ಸಂಸ್ಥೆಯನ್ನು ನಾವು ಬಹಿಷ್ಕರಿಸಿದೆವೋ ಆ ಸಂಸ್ಥೆಯ ಕೀರ್ತಿ ಪ್ರತಿಷ್ಠೆಗಳನ್ನು ಪ್ರತಿಘರಿದು ಬಹಿಷ್ಕಾರವು ಖಂಡಿತವಾಗಿಯೂ ತಗ್ಗಿಸಿತು.

ಎಲ್ಲಕ್ಕಿಂತ ಮುಖ್ಯವಾದ ಬಹಿಷ್ಕಾರ ; ಹಿಂಸೆಯ ಬಹಿಷ್ಕಾರ . ಅಹಿಂಸೆ ಒಂದು ಸಲ ಪೂರ್ಣ ಯಶಸ್ವಿಯಾದಂತೆ ಕಂಡರೂ ; ಆ ಅಹಿಂಸೆಯು ಮೇಲು ಮೇಲಿನದು ಎಂದು ಬೇಗನೆ ತಿಳಿದುಬಂತು. ಅದು ಅಸಹಾಯಕತೆಯಿಂದ ಹುಟ್ಟಿದ ಕ್ರಿಯಾಶೂನ್ಯ ಅಹಿಂಸೆಯೇ ವಿನಾ ಸಮಯಸ್ಫೂರ್ತಿಯಿಂದ ಕೆಲಸಮಾಡುವ ವಿಚಾರಶೀಲ ತರ್ಕ ಅದಲ್ಲ. ಇದರಿಂದ ಏನಾಯಿತೆಂದರೆ ಯಾರು ಅಸಹಕಾರ ಮಾಡಲಿಲ್ಲವೋ ಅವರ ಬಗ್ಗೆ ಒಂದು ಅಸಹನೆಯ ಭಾವ ಚಿಮ್ಮಿಬಂತು . ಇದೂ ಸಹ ಒಂದು ಬಗೆಯ ಸೂಕ್ಷ್ಮ ಹಿಂಸೆ. ಇಷ್ಟೆಲ್ಲ ದೋಷಪೂರ್ಣವಾಗಿದ್ದರೂ ಹೊರಹೊಮ್ಮಬಹುದಾಗಿದ್ದ ಶಾರೀರಿಕ ಹಿಂಸೆಯನ್ನು ಈ ಅಹಿಂಸಾ ಪ್ರಚಾರ ತಡೆಗಟ್ಟಿತು ಎಂದು ಧೈರ್ಯವಾಗಿ ಹೇಳುತ್ತೇನೆ. ಅಹಿಂಸಾತ್ಮಕ ಅಸಹಕಾರ ಹುಟ್ಟದಿದ್ದರೆ ಖಂಡಿತವಾಗಿಯೂ ಶಾರೀರಿಕ ಹಿಂಸೆ ನಡೆದೇ ನಡೆಯುತ್ತಿತ್ತು. ಅಹಿಂಸಾತ್ಮಕ ಅಸಹಕಾರದಿಂದ ಜನರಿಗೆ ತಮ್ಮ ಅಂತಃಶಕ್ತಿಯ ಅರಿವು ಉಂಟಾಗಿದೆ ಎಂದು ವಿಚಾರಪೂರ್ವಕವಾಗಿ ನಾನು






ಮನದಟ್ಟು ಮಾಡಿಕೊಂಡಿದ್ದೇನೆ. ಕಷ್ಟ ಸಹನೆಯಿಂದ ಜನತೆಯಲ್ಲಿ ಹುದುಗಿದ್ದ ಪ್ರತಿಭಟನಾ ಶಕ್ತಿಯು ಹೊರಹೊಮ್ಮಿದೆ. ಜನತೆಯಲ್ಲಿ ಅಪಾರ ಜಾಗೃತಿ, ಆಗಿದೆ. ಬೇರೆ ಯಾವ ಪದ್ಧತಿಯಿಂದಲೂ ಇದು ಸಾಧ್ಯವಾಗುತ್ತಿರಲಿಲ್ಲ.

ಅಹಿಂಸಾತ್ಮಕ ಅಸಹಕಾರದಿಂದ ನಮಗೆ ಸ್ವರಾಜ್ಯ ಬರಲಿಲ್ಲ. ಕೆಲವು ವಿಷಾದಕರ ಘಟನೆಗಳು ನಡೆದು ಹೋದವು. ಯಾವ ಸಂಸ್ಥೆಗಳನ್ನು ನಾವು ಬಹಿಷ್ಕರಿಸಬೇಕು ಎಂದಿದ್ದೇವೋ ಅವು ಇನ್ನೂ ಮುಂದುವರಿಯತ್ತಲೇ ಇವೆ. ಆದರೂ ನನ್ನ ವಿನಯಪೂರ್ವಕ ಅಭಿಪ್ರಾಯ ಇಷ್ಟು . ರಾಜಕೀಯ ಸ್ವಾತಂತ್ರ್ಯ ವನ್ನು ಸಂಪಾದಿಸಲು ಅಹಿಂಸಾತ್ಮಕ ಅಸಹಕಾರ ಒಂದು ಸಾಧನ ಎಂಬ ಮಾತು ಸ್ಥಿರವಾಗಿ ಆಂಶಿಕವಾಗಿ ನಾವು ಸಫಲವಾಗಿದ್ದರೂ ಆದರಿಂದ ನಾವು ಸ್ವರಾಜ್ಯದ ಹತ್ತಿರ ಹತ್ತಿರ ಬಂದಿದ್ದೇವೆ. ಯಾವ ಧ್ಯೇಯಕ್ಕಾಗಿ ನಾವು ಕಷ್ಟ ಸಹಿಸಲು ಶಕ್ತರಾಗುತ್ತೇವೆಯೋ ಆ ಶಕ್ತಿಯು ಆ ಧ್ಯೇಯವನ್ನು ಸಾಧಿಸಬಲ್ಲದು ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ.

"ಒಂದು ಸನ್ನಿವೇಶ ನಮ್ಮ ಇದುರಿಗೆ ಬಂದು ನಿಂತಿದೆ. ವ್ಯಕ್ತಿಗಳು ಒಟ್ಟು ದೃಢವಾಗಿ ಅಹಿಂಸೆಯನ್ನು ಒಪ್ಪಿ ಸಜಾ ಆದರೆ ಈ ಚಳವಳಿಗೆ ಇಳಿದ ಬಹುಜನ, ಪರದೇಶೀ ವಸ್ತ್ರ ಬಹಿಷ್ಕಾರ ಒಂದನ್ನು ಬಿಟ್ಟು, ಉಳಿದವುಗಳಲ್ಲಿ ನಂಬಿಕೆ ಕಳೆದುಕೊಂಡಿದ್ದಾರೆ. ವಕೀಲರನೇಕರು ತಮ್ಮ ವೃತ್ತಿಯನ್ನು ಮತ್ತೆ ಆರಂಭಿಸಿದ್ದಾರೆ. ಕೆಲವರಿಗಂತೂ ನಾವು ಏಕೆ ಬಿಟ್ಟೆವೋ ಎಂದು ಪಶ್ಚಾತ್ತಾಪವು ಹುಟ್ಟಿತು . ಶಾಸನಸಭೆಗಳನ್ನು ಬಹಿಷ್ಕರಿಸಿದ್ದ ಅನೇಕರು ಮತ್ತೆ ಸಭೆಗಳಿಗೆ ಹೋಗಿದ್ದಾರೆ. ಶಾಸನಸಭಾ ಪ್ರವೇಶವನ್ನು ನಂಬುವ. ಜನರ ಸಂಖ್ಯೆ ಹೆಚ್ಚುತ್ತಿದೆ. ಸರಕಾರಿ ಶಾಲಾ ಕಾಲೇಜುಗಳನ್ನು ಬಹಿಷ್ಕರಿಸಿದ್ದ ನೂರಾರು ವಿದ್ಯಾರ್ಥಿಗಳು ಹುಡುಗಿಯರೂ ಪಶ್ಚಾತ್ತಾಪಗೊಂಡು ಪುನಃ "ಹಿಂದಕ್ಕೆ ಹೋಗಿದ್ದಾರೆ. ತಮಗೆ ಪ್ರವೇಶ ಬೇಕು – ಎಂದು ಹೇಳುವವರ ಸಂಖ್ಯೆಗೆ ಸರಕಾರಿ ಶಾಲಾ ಕಾಲೇಜುಗಳಲ್ಲಿ ಸ್ಥಳ ಒದಗಿಸುವುದು ಕಷ್ಟವಾಗಿದೆ. ಎಂದು ನಾನು ಕೇಳಿದ್ದೇನೆ. ಇಂಥ ಪರಿಸ್ಥಿತಿಯಲ್ಲಿ ಈ ಬಹಿಷ್ಕಾರಗಳಿಂದ ಯಾವ ಯಾವ ಜನರು ನೇರವಾಗಿ ಹಾನಿಗೆ ಒಳಗಾಗಿದ್ದಾರೆಯೋ ಅಂಥವರನ್ನು ಬಿಟ್ಟು ಕೂಡ ಕಾಂಗ್ರೆಸ್ಸು ಈ ಬಹಿಷ್ಕಾರಗಳನ್ನು ಮುಂದುವರಿಸಲು ಸಿದ್ಧರಾಗದಿದ್ದರೆ ಇವುಗಳನ್ನು

ರಾಷ್ಟ್ರೀಯ ಕಾರ್ಯಕ್ರಮಗಳ ರೀತಿ ನಡೆಸುವುದು ಸಾಧ್ಯವಾಗಲಾರದು. ಆದರೆ ಇಂಥ ಜನರನ್ನು ಕಾಂಗ್ರೆಸ್ಸಿನಿಂದ ಹೊರಗಿಡುವುದು ವ್ಯಾವಹಾರಿಕವಾಗಿ ಸುಲಭವಲ್ಲ. ಅಪರಿವರ್ತನ ವಾದಿಗಳನ್ನು ಹೊರಗೆ ಓಡಿಸಬೇಕು ಎಂದು ಹೇಳುವುದು ಎಷ್ಟು ಕಾರ್ಯಸಾಧುವಲ್ಲವೋ ಇದೂ ಅಷ್ಟೇ. ಇಬ್ಬರೂ ಕಾಂಗ್ರೆಸ್ಸಿನೊಳಗೆ ಇರಬೇಕು . ಪರಸ್ಪರ ಹಸ್ತಕ್ಷೇಪ ಮಾಡಬಾರದು. ಪರಸ್ಪರ ವಿರುದ್ಧವಾಗಿ ವೈರ ತುಂಬಿ ಟೀಕೆ ಮಾಡಬಾರದು. ಹಿಂದೂ ಮುಸ್ಲಿಂ ಏಕತೆಗೆ ಯಾವುದು ಅನ್ವಯಿಸುತ್ತದೆಯೋ ಅದೇ ಭಿನ್ನ ಭಿನ್ನ ರಾಜಕೀಯ ಪಕ್ಷಗಳಿಗೂ ಅನ್ವಯಿಸುತ್ತದೆ ಎಂದು ನನ್ನ ಭಾವನೆ. ನಾವು ಪರಸ್ಪರ ಸಹನೆಯಿಂದ ಇರಬೇಕು . ಕಾಲಕ್ರಮೇಣ, ಒಬ್ಬರು ತಮ್ಮ ವಿರುದ್ಧವಾದ ಇನ್ನೊಂದು ಮತಕ್ಕೆ ಪರಿವರ್ತನೆ ಹೊಂದಬಹುದೆಂದು ನಾವು ನಂಬೋಣ. ಇಷ್ಟೇ ಅಲ್ಲ ಇನ್ನೂ ಮುಂದೆ ಹೋಗಿ ಕಾಂಗ್ರೆಸ್ಸನ್ನು ಬಿಟ್ಟಿರುವ ಉದಾರ ಮತವಾದಿಗಳನ್ನೂ ಇತರರನ್ನು ಮತ್ತೆ ಕಾಂಗ್ರೆಸಿಗೆ ಸೇರುವಂತೆ ಪ್ರಾರ್ಥಿಸಬೇಕು. ಅಸಹಕಾರವನ್ನು ಸದ್ಯಕ್ಕೆ ನಿಲ್ಲಿಸಿದರೆ, ಅವರು ಹೊರಗೆ ಇರಲು ಯಾವ ಕಾರಣವೂ ಇಲ್ಲ. ಈ ಕೆಲಸದಲ್ಲಿ ಕಾಂಗ್ರೆಸ್ಸಿಗರೇ ಮೊದಲು ಹೆಜ್ಜೆ ಹಾಕಬೇಕು. ಅವರನ್ನು ಸ್ನೇಹಪೂರ್ಣವಾಗಿ ಆಹ್ವಾನಿಸಿ ಅವರು ಒಳಕ್ಕೆ ಬರಲು ಸುಲಭವಾಗುವಂತೆ ಮಾಡಬೇಕು . ಇದರಿಂದ ಈಗ ನಿಮಗೆ ಅರ್ಥವಾಗಬಹುದು ಸ್ವರಾಜ್ಯ ಪಕ್ಷದವರೊಂದಿಗೆ ನಾನು ಏಕೆ ಒಪ್ಪಂದ ಮಾಡಿಕೊಂಡೆನು ಎಂಬುದು.

**ಪರದೇಶಿ ವಸ್ತ್ರ ಬಹಿಷ್ಕಾರ:**

ಒಂದು ಬಹಿಷ್ಕಾರವನ್ನು ಮಾತ್ರ ನಾವು ಉಳಿಸಿಕೊಂಡಿದ್ದೇವೆ ಎಂಬುದನ್ನು ಮರೆಯ ಬೇಡಿರಿ. ಒಬ್ಬ ಇಂಗ್ಲೀಷ್ ಸ್ನೇಹಿತನ ಮನಸ್ಸಿಗೆ ನೋವು ಆಗಬಾರದು ಎಂದು ಬಹಿಷ್ಕಾರ ಎಂಬ ಶಬ್ದವನ್ನು ಬದಲಿಸಿ ಪರದೇಶೀ ವಸ್ತ್ರದ ಉಪಯೋಗವನ್ನು ಬಿಡಬೇಕು ಎಂದು ಒಪ್ಪಂದದಲ್ಲಿ ಮಾಡಿಕೊಂಡಿದೆ. ಬಹಿಷ್ಕಾರ ಶಬ್ದದಲ್ಲಿ ಒಂದು ದುರ್ವಾಸನೆ ಇರುವುದೇನೋ ನಿಜ. ಅದು ದ್ವೇಷವನ್ನು ಸೂಚಿಸುತ್ತದೆ. ನನ್ನ ಅರ್ಥ ಯಾವುದೂ ನನ್ನ ಮನಸಿನಲ್ಲಿ ಇಲ್ಲ. ಕೇವಲ ಬ್ರಿಟಿಷ್ ವಸ್ತ್ರ ಬಹಿಷ್ಕಾರ ಇದಲ್ಲ. ಪರದೇಶಿ ವಸ್ತ್ರ ಬಹಿಷ್ಕಾರ. ಇಂಥ ಬಹಿಷ್ಕಾರ ನಮಗೆ ಕೇವಲ ಒಂದು ಹಕ್ಕು ಮಾತ್ರವಲ್ಲ ಅದು ನಮಗೆ ಒಂದು ಕರ್ತವ್ಯ . ನಮ್ಮ ದೇಶದ ನದಿಗಳ ನೀರಿನ ಬದಲು ಪರದೇಶದಿಂದ ನೀರನ್ನು ತರಿಸಲು ಮೊದಲಿಟ್ಟರೆ ಅದರ ಬಹಿಷ್ಕಾರ ಹೇಗೆ ನಮ್ಮ ಕರ್ತವ್ಯವಾಗುತ್ತದೆಯೋ ಅಷ್ಟೇ ಮಟ್ಟಿಗೆ ಇದಾದರೂ ನಮ್ಮ ಕರ್ತವ್ಯ ಆದರೆ ಇದು ವಿಷಯಾಂತರ.

ನಾನು ಹೇಳಬೇಕಾದ್ದು ಇಷ್ಟು : ಈ ಒಪ್ಪಂದದಿಂದ ಪರದೇಶೀ ವಸ್ತ್ರ ಬಹಿಷ್ಕಾರ ಉಳಿಯುತ್ತದೆ. ಮತ್ತು ಅದಕ್ಕೊಂದು ಮಹತ್ವ ಬರುತ್ತದೆ. ನನ್ನ ಪಾಲಿಗೆ ಇದಂತೂ ಹಿಂಸಾತ್ಮಕ ವಿಧಾನಕ್ಕೆ ಒಂದು ಪರ್ಯಾಯ. ಕೆಲವು ಕೃತಿ, ಬೈಗಳು, ರೇಗಿಸುವ ನಡತೆ, ಸುಳ್ಳು ಹೇಳುವದು, ಇತರರನ್ನು ಗಾಸಿಗೊಳಿಸುವದು, ಕೊಲೆ ಮಾಡುವದು ಇಂಥವೆಲ್ಲ ಹಿಂಸೆಯ ಸಂಕೇತ. ಅದರಂತೆಯೇ ನಯ ವಿನಯ, ಯಾರಿಗೂ ನೋವು ಕೊಡದ ನಡತೆ; ಸತ್ಯಸಂದತೆ ಇತ್ಯಾದಿ ಅಹಿಂಸೆಯ ಸಂಕೇತ. ನನ್ನ ಮಟ್ಟಿಗೆ ಪರದೇಶೀ ವಸ್ತ್ರ ಬಹಿಷ್ಕಾರವೂ ಅಹಿಂಸೆಯ ಸಂಕೇತವೇ. ಕ್ರಾಂತಿಕಾರಿ

ಅಪರಾಧವನ್ನು ಒತ್ತಾಯ ತರುವ ಉದ್ದೇಶದಿಂದ ಮಾಡಲಾಗುತ್ತದೆ. ಆದರೆ ಆ ಒತ್ತಾಯ ಸಿಟ್ಟಿನದು, ದ್ವೇಷದ ಅಹಿಂಸೆಯ ಕೃತಿಗಳಿಂದ ಆಗುವ ಒತ್ತಾಯ ಹಿಂಸಾಕೃತಿಯ ಒತ್ತಾಯಕ್ಕಿಂತ ಹೆಚ್ಚು ಪರಿಣಾಮಕಾರಿ ಎಂದು ನನ್ನ ವಾದ. ಈ ಒತ್ತಾಯ ಸದ್ಭಾವನೆಯದು,ನಮ್ರತೆಯದು . ಪರದೇಶಿ ವಸ್ತ್ರ ಬಹಿಷ್ಕಾರದಿಂದ ಇಂಥ ಸೌಮ್ಯ ಒತ್ತಾಯ ಆಗುತ್ತದೆ. ನಾವು ತರಿಸಿಕೊಳ್ಳುವ ಪರದೇಶಿ ವಸ್ತುವು ಹೆಚ್ಚಾಗಿ ಲ್ಯಾಂಕಾಶೈರ್ ನದು . ನಮ್ಮ ಆಮದು ಪದಾರ್ಥಗಳಲ್ಲಿ ಎಲ್ಲಕ್ಕಿಂತ ಅದೇ ಹೆಚ್ಚಿನದು. ಎರಡನೆಯದು ಸಕ್ಕರೆ. ಭಾರತದೊಡನೆ ಲ್ಯಾಂಕಾಷೈರಿನ ವ್ಯಾಪಾರವೇ ಬ್ರಿಟನ್ನಿನ ಮುಖ್ಯ ಆಸಕ್ತಿ. ಭಾರತದ ರೈತನನ್ನು ನಾಶಮಾಡಿ ಅವನ ಮೇಲೆ ಅಂಶಿಕ ನಿರುದ್ಯೋಗವನ್ನು ಸೋಮಾರಿತನವನ್ನೂ ಹೊರಿಸುವುದು ಎಲ್ಲಕ್ಕಿ0ತ ಹೆಚ್ಚು ಇದೇ.

ಆತನಿಗೆ ಇದ್ದದ್ದು ನೂಲು ಉಪವೃತ್ತಿ. ಅದನ್ನು ಇದು ಇಲ್ಲದಂತೆ ಮಾಡಿತು. ಆದ್ದರಿಂದ ನಮ್ಮ ರೈತ ಬದುಕಬೇಕು ಎಂದು ಪರದೇಶಿ ವಸ್ತ್ರ ಬಹಿಷ್ಕಾರ ಅತ್ಯಗತ್ಯ. ಹೀಗೆ ನಮ್ಮ ರೈತನನ್ನು ಅಗ್ಗವಾದ ಮತ್ತು ಚೆಂದಕಾಣುವ ಪರದೇಶಿ ವಸ್ತ್ರ ಕೊಳ್ಳುವುದನ್ನು ಬಿಡುವಂತೆ ಮಾಡುವದು ಒಂದೇ ಉದ್ದೇಶವಲ್ಲ . ಈ ಬಹಿಷ್ಕಾರಕ್ಕೆ ತನ್ನ ಬಿಡುವಿನ ವೇಳೆಯಲ್ಲಿ ಅರಳೆಯನ್ನು ಹಿಂಜುವುದು, ನೂಲುವದು ಮುಂತಾದ್ದನ್ನು ಮಾಡಿ ಅದನ್ನು ತನ್ನ ಹಳ್ಳಿಯಲ್ಲೇ ನೇಯಿಸಿಕೊಳ್ಳುವಂತೆ ಅವನ ಮನವೊಲಿಸಿ ಅಥವಾ ಹಾಗೆ ಹಳ್ಳಿಯಲ್ಲಿ ನೇಯ್ದ ಖಾದಿಯನ್ನು ಉಟ್ಟು ತೊಟ್ಟು ಪರದೇಶಿವಸ್ತ್ರವನ್ನು , ಅಷ್ಟೇ ಅಲ್ಲ ದೇಶೀ ಗಿರಿಣಿಬಟ್ಟೆಯನ್ನು ಕೊಳ್ಳುವದನ್ನೂ ತಪ್ಪಿಸುವದು, ಕೊಳ್ಳದಂತೆ ಮಾಡುವದು ಇದರ ಉದ್ದೇಶ. ಹೀಗೆ ಕೈನೂಲು ಕೈನೇಯ್ಗೆಯ ಮೂಲಕ ಎಂದರೆ ಖಾದಿಯ ಮೂಲಕ ಪರದೇಶಿ ವಸ್ತ್ರ ಬಹಿಷ್ಕಾರ ನಡೆಸುವದು, ರೈತನಿಗೆ ದುಡ್ಡು ಮಿಗಿಸುವದು ಮಾತ್ರವಲ್ಲದೆ, ಒಂದು ಉತ್ತಮ ಸಮಾಜ ಸೇವೆ ಮಾಡಲು ನಮ್ಮ ಕೆಲಸಗಾರರಿಗೆ ಅದು ಅವಕಾಶ ಮಾಡಿಕೊಡುತ್ತದೆ. ಇದರಿಂದ ಹಳ್ಳಿಯವರ ಪ್ರತ್ಯಕ್ಷ ಸಂಪರ್ಕ ನಮಗೆ ಆಗುತ್ತದೆ. ಅವರಿಗೆ ನಿಜವಾದ ರಾಜಕೀಯ ಶಿಕ್ಷಣ ಕೊಟ್ಟು, ಅವರು ಸ್ವಾವಲಂಬಿಗಳು , ಸ್ವಾಶ್ರಯಿಗಳೂ ಆಗುವಂತೆ ಮಾಡುತ್ತದೆ. ಆದ್ದರಿಂದ ಸಹಕಾರ ಸಂಘಗಳು ಅಥವಾ ಬೇರೆ ಯಾವದೇ ಬಗೆಯ ಗ್ರಾಮಸಂಸ್ಥೆಗಳು ಇವುಗಳಿಗಿಂತ ಎಷ್ಟೋ ಪಾಲು ಉತ್ತಮ ಖಾದಿಯ ಸಂಘಗಳು. ಅದರಿಂದ ಮಹತ್ತರ ರಾಜಕೀಯ ಪರಿಣಾಮ ಆಗುತ್ತದೆ. ಏಕೆಂದರೆ ಬ್ರಿಟನ್ನಿಗೆ ಇರುವ ದುರಾಶೆಯನ್ನು ಕಳೆಯುತ್ತದೆ. ಲ್ಯಾಂಕಾಶೈರಿನ ಈ ವ್ಯಾಪಾರ ಅನೈತಿಕ ಎನ್ನುತ್ತೇನೆ. ಭಾರತೀಯ ಕೋಟ್ಯಂತರ ರೈತರ ವಿನಾಶದ ಮೇಲೆ ಇದನ್ನು ಕಟ್ಟಿದ್ದಾರೆ. ಒಂದು ಅನೀತಿಯ ದಾರಿ ಇನ್ನೊಂದಕ್ಕೆ ಮಾರ್ಗಮಾಡಿ ಕೊಡುತ್ತದೆ. ಬ್ರಿಟನ್ ಎಷ್ಟೋ ಅನೀತಿಯ ಕೃತಿಗಳನ್ನು ಮಾಡಿದೆ. ಅವು ರುಜುವಾತು ಆಗಿವೆ. ಆದರೆ

ಇವೆಲ್ಲವೂ ಈ ಒಂದು ಅನೈತಿಕ ವ್ಯಾಪಾರದಿಂದಲೇ ಹುಟ್ಟಿದವು. ಆದ್ದರಿಂದ ಭಾರತದ ಸ್ವಪ್ರಯತ್ನದ ಮೂಲಕ ಬ್ರಿಟನ್ನಿನ ದಾರಿಯಲ್ಲಿಯ ಈ ಮಹತ್ತರ ಪ್ರಲೋಭನೆ ಅಳಿದು ಹೋದರೆ ಅದು ಭಾರತಕ್ಕೂ ಒಳಿತು ಬ್ರಿಟನ್ನಿಗೂ ಒಳಿತು. ಮತ್ತು ಬ್ರಿಟನ್ನು ಇವತ್ತು ಪ್ರಬಲ ಜಾಗತಿಕ ಶಕ್ತಿ ಆಗಿರುವದರಿಂದ ಮಾನವತೆಗೂ ಒಳಿತು.

ಬೇಡಿಕೆಯಂತೆ ಪೂರೈಕೆ ಎಂಬ ಈ ಸಿದ್ಧಾಂತವನ್ನು ನಾನು ಒಪ್ಪುವುದಿಲ್ಲ. ಎಷ್ಟೋ ಸಲ ತದ್ವಿರುದ್ಧವಾಗಿ, ನೀತಿ ನಿಯಮವಿಲ್ಲದ ವರ್ತಕರು ಕೃತ್ರಿಮವಾಗಿ ಬೇಡಿಕೆಯನ್ನು ಹುಟ್ಟಿಸುತ್ತಾರೆ. ವ್ಯಕ್ತಿಗಳಿಗೆ ಇದ್ದ ಹಾಗೆ ರಾಷ್ಟ್ರಗಳಿಗೂ ನೀತಿಯ ಬಂಧನ ಇದೆ ಎಂದು ನಾನು ತಿಳಿದಿದ್ದೇನೆ. ಹಾಗಿದ್ದರೆ ಯಾರ ಅವಶ್ಯಕತೆಗಳನ್ನು ಪೂರೈಸಲು ಬಯಸುತ್ತೇವೆಯೋ ಅವರ ಯೋಗಕ್ಷೇಮವನ್ನೂ ನೋಡಿಕೊಳ್ಳಬೇಕು. ಉದಾಹರಣೆಗೆ, ರಾಷ್ಟ್ರವು ಕುಡುಕರಿಗೆ ಹೆಂಡವನ್ನು ಒದಗಿಸುವದು ಅಪರಾಧ ಮತ್ತು ಅನೈತಿಕ. ಒಂದು ರಾಷ್ಟ್ರವು ಇನ್ನೊಂದು ರಾಷ್ಟಕ್ಕೆ ಆಹಾರಧಾನ್ಯವನ್ನೂ, ಬಟ್ಟೆಯನ್ನೂ ನಿರ್ಯಾತಮಾಡುವದರಿಂದ, ಆಯಾತ ಮಾಡಿಕೊಳ್ಳುವ ರಾಷ್ಟದಲ್ಲಿ ಧಾನ್ಯ ಮತ್ತು ಬಟ್ಟೆಯ ಉತ್ಪಾದನೆ ನಿಂತು ಜನರು ಸೋಮಾರಿಗಳೂ ಬಡವರೂ ಆದರೆ, ಈ ಆಹಾರಧಾನ್ಯ ಹಾಗೂ ಬಟ್ಟೆಯ ನಿರ್ಯಾತ ಮಾಡುವದು, ಹೆಂಡದ ನಿರ್ಯಾತದಷ್ಟೇ ಅಪರಾಧ. ಈ ಬಗೆಯ ಒತ್ತಾಯ ಸೋಮಾರಿತನ, ಬಡತನ ಮನುಷ್ಯನ ಆತ್ಮಕ್ಕೂ ದೇಹಕ್ಕೂ ಹೆಂಡದಷ್ಟೇ ಹಾನಿಕರ. ಮನಸ್ಸಿನ ಹತಾಶಾಭಾವವು, ತಿರುವುಮುರುವು ಆದ ಉದ್ದೇಗವೇ ಆಗಿದೆ. ಆದ್ದರಿಂದ ಅದರ ಪರಿಣಾಮ ಕೂಡ ಅಷ್ಟೇ ಹಾನಿಕರ. ಕೆಲವು ವೇಳೆ ಇದು ಇನ್ನೂ ಹೆಚ್ಚು ಹಾನಿಕರ. ಏಕೆಂದರೆ ಈ ಸೋಮಾರಿತನ ಮತ್ತು ಬಡತನದಿಂದ ಉಂಟಾಗುವ ಹತಾಶಾಭಾವವು ಅನೈತಿಕ, ಪಾಪ ಎಂಬುದು ನಮಗಿನ್ನೂ ತಿಳಿದಿಲ್ಲ.

**ಬ್ರಿಟನ್ನಿನ ಕರ್ತವ್ಯ:**

ಆದ್ದರಿಂದ ಭಾರತದ ಕ್ಷೇಮವನ್ನು ಗಮನಿಸಿಕೊಂಡು ತನ್ನ ರಫ್ತುವ್ಯಾಪಾರವನ್ನು ಬ್ರಿಟನ್ನು ಸಕ್ರಮಗೊಳಿಸಿಕೊಳ್ಳಬೇಕು. ಇದು ಅದರ ಕರ್ತವ್ಯವೆಂದು ನನ್ನ ಅಭಿಪ್ರಾಯ. ಭಾರತ ಕೂಡ ತನ್ನ ಕಲ್ಯಾಣಕ್ಕೆ, ಯೋಗಕ್ಷೇಮಕ್ಕೆ ಅನುಕೂಲವಾಗುವಂತೆ ತನ್ನ ಆಮದು ವ್ಯಾಪಾರವನ್ನು ಸಕ್ರಮಿಸಿಕೊಳ್ಳಬೇಕಾದ್ದು ಅದರ ಕರ್ತವ್ಯ ನೀತಿಯ ಮೌಲ್ಯಗಳನ್ನು ಲೆಕ್ಕಿಸದ ಅಥವಾ ಗಮನಿಸದ ಅರ್ಥಶಾಸ್ತ್ರ ಸತ್ಯಕ್ಕೆ ದೂರ. ಅಹಿಂಸೆಯ ನ್ಯಾಯವನ್ನು ಅರ್ಥಶಾಸ್ತ್ರದಲ್ಲಿ ತರುವುದು ಎಂದರೆ ಅಂತರ ರಾಷ್ಟ್ರೀಯ ವ್ಯಾಪಾರದಲ್ಲಿ ನೀತಿಯ ನಿಯಮಗಳನ್ನು ಅಳವಡಿಸಿ ಕ್ರಮಗೊಳಿಸುವುದು ಎಂದು ಅರ್ಥ. ಅಂತರರಾಷ್ಟ್ರೀಯ ಸಂಬಂಧಗಳನ್ನು ನೀತಿಯ ತಳ ಹದಿಯಮೇಲೆ ಭಾರತದ ಪ್ರಯತ್ನಗಳ ಮುಖಾಂತರ ನಿಲ್ಲಿಸುವದೇ ನನ್ನ ಮಹತ್ವಾಕಾಂಕ್ಷೆ. ಸಾಮೂಹಿಕ ಅಹಿಂಸೆ ಪರಿಮಿತವಾಗಿ ಬೆಳೆಯುವದರ ಬಗ್ಗೆ ನನಗೆ ನಿರಾಶೆ ಇಲ್ಲ. ಮನುಷ್ಯ ಸ್ವಭಾವ



ಯಾವಾಗಲೂ ಅಧೋಗತಿಯನ್ನೇ ಹಿಡಿಯುತ್ತದೆ ಎಂದು ನಂಬಲು ನಾನು ಸಿದ್ಧನಿಲ್ಲ.

ನೂಲುವವರಿಂದ, ಖಾದಿಯಿಂದ ಪರದೇಶೀ ವಸ್ತ್ರ ಬಹಿಷ್ಕಾರ ಸಫಲವಾದರೆ ಅದರಿಂದ ಪ್ರಥಮ ತರಗತಿಯ ರಾಜಕೀಯ ಫಲ ಬರಲೇಬೇಕು. ಅಷ್ಟೇ ಅಲ್ಲ, ಭಾರತದ ಅತ್ಯಂತ ದೀನ ದರಿದ್ರರನ್ನು ಗಂಡಸರಾಗಲೀ ಹೆಂಗಸರಾಗಲಿ ತಮ್ಮ ಶಕ್ತಿಯನ್ನು ಅರಿತುಕೊಳ್ಳುವಂತೆ ಮಾಡಿ ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅವರು ಭಾಗವಹಿಸುವಂತೆ ಮಾಡುವುದೂ ಇದರ ಉದ್ದೇಶ. ಬ್ರಿಟಿಷ್ ವಸ್ತ್ರ ಬಹಿಷ್ಕಾರದ ಅಥವಾ ಬ್ರಿಟಿಷ್ ವಸ್ತು ಬಹಿಷ್ಕಾರದ ಹಿಂಸಾತ್ಮಕ ಸ್ವಭಾವವನ್ನೂ ಅದರ ವ್ಯರ್ಥತೆಯನ್ನೂ ತೋರಿಸುವ ಅಗತ್ಯ ಈಗ ಬಹಳಮಟ್ಟಿಗೆ ಇಲ್ಲ.

**ಪರದೇಶ – ವಿರುದ್ಧ – ಬ್ರಿಟಿಷ್:**

ಅನೇಕ ದೇಶಭಕ್ತರು ಸೂಚಿಸಿದಂತೆ, ಆದರೆ ಭಾರತದ ಕಲ್ಯಾಣ ದೃಷ್ಟಿಯಿಂದ ಮಾತ್ರ ನಾನು ಈ ಬಹಿಷ್ಕಾರವನ್ನು ನೋಡುತ್ತಿದ್ದೇನೆ. ಬ್ರಿಟಿಷ್ ವಸ್ತುಗಳೆಲ್ಲವೂ ನಮಗೆ ಬಾಧಕವಲ್ಲ; ಉದಾಹರಣೆಗೆ, ಇಂಗ್ಲಿಷ್ ಪುಸ್ತಕಗಳಿಂದ ನಮ್ಮ ಬೌದ್ಧಿಕ, ಆಧ್ಯಾತ್ಮಿಕ ಲಾಭವೇ ಆಗುತ್ತದೆ. ಬಟ್ಟೆಯ ವಿಷಯದಲ್ಲಿ ಕೇವಲ ಬ್ರಿಟಿಷ್ ಬಟ್ಟೆ ಮಾತ್ರವಲ್ಲ, ಎಲ್ಲ ಪರದೇಶೀ ಬಟ್ಟೆಯೂ ನಮಗೆ ಬಾಧಕವೇ. ಹಾಗೆ ನೋಡಿದರೆ ಸ್ವಲ್ಪ ಕಡಿಮೆಯ ಪ್ರಮಾಣದಲ್ಲಿ ನಮ್ಮ ಗಿರಣಿಬಟ್ಟೆಯು ನಮಗೆ ಬಾಧಕವೇ. ಕೈನೂಲು ಮತ್ತು ಖಾದಿ ಮೂಲಕ ಸಾಧಿಸುವ ಬ್ರಿಟಿಷ್ ಬಹಿಷ್ಕಾರವು ಎಷ್ಟು ಪ್ರಯೋಜನಕಾರಿ ಆಗಬಲ್ಲದೋ ಅಷ್ಟು ಇನ್ನಾವುದೇ ರೀತಿಯಿಂದ ಸಾಧಿಸಿದ ಬ್ರಿಟಿಷ್ ವಸ್ತ್ರ ಬಹಿಷ್ಕಾರವು ಪ್ರಯೋಜನಕಾರಿ ಆಗಲಾರದು. ಇದರಿಂದ ಕನಿಷ್ಠ ಪಕ್ಷ ಎಲ್ಲ ಪರದೇಶೀ ಬಟ್ಟೆಯ ಬಹಿಷ್ಕಾರವಾದರೂ ಅಗತ್ಯ ಆಗುತ್ತದೆ. ಈ ಬಹಿಷ್ಕಾರವು ಯಾರನ್ನೂ ಶಿಕ್ಷಿಸಲು ಮಾಡಿದ್ದಲ್ಲ. ಇದು ರಾಷ್ಟ್ರೀಯ ಅಸ್ತಿತ್ವಕ್ಕೆ ಅಗತ್ಯ.

**ಆಕ್ಷೇಪಣೆಗಳ ವಿಚಾರ:**

ಟೀಕಾಕಾರರು ಹೇಳುತ್ತಾರೆ, ರಾಟೆ ಇನ್ನೂ ರೂಢಿ ಆಗಿಲ್ಲ. ಅದರಲ್ಲಿ ಸಾಕಷ್ಟು ಹುರುಪು ಹೆಚ್ಚಿಸುವ ಗುಣ ಅಥವಾ ಭಾವೋದ್ದೀಪಕತೆ ಇಲ್ಲ. ಹೆಂಗಸರಿಗೆ ಮಾತ್ರ ಈ ಉದ್ಯೋಗ ಸರಿಹೋದೀತು; ಹೀಗೆ ಮಾಡುವದರಿಂದ ಮತ್ತೆ ನಾವು ಮಧ್ಯಯುಗಕ್ಕೆ ಹೋದಂತೆ ಆಗುತ್ತದೆ.



ಯಂತ್ರವು ವಿಜ್ಞಾನದ ವೈಭವೋಪೇತ ಪ್ರಗತಿಯ ದ್ಯೋತಕವಾಗಿದೆ. ಅದರ ವಿರುದ್ಧ ರಾಟೆಯನ್ನು ತರುವದು ವ್ಯರ್ಥಪ್ರಯತ್ನ, ಇತ್ಯಾದಿ. ಆದರೆ ನನ್ನ ಅಭಿಪ್ರಾಯದಲ್ಲಿ ಭಾರತಕ್ಕೆ ಭಾವೋದ್ದೀಪಕತೆ ಬೇಕಾಗಿಲ್ಲ. ಗಟ್ಟಿಯಾದ ಕೆಲಸ ನಮ್ಮ ಜನಕೋಟಿಗೆ ಬೇಕು. ಗಟ್ಟಿಕೆಲಸ ಭಾವೋದ್ದೀಪಕವೂ ಹೌದು, ಪುಷ್ಟಿಕರವೂ ಹೌದು. ರಾಟೆಯ ಪ್ರಯೋಗಕ್ಕೆ ನಾವಿನ್ನೂ ಸಾಕಷ್ಟು ಅವಕಾಶಕೊಟ್ಟಿಲ್ಲ.

ನಮ್ಮಲ್ಲಿ ಅನೇಕರು ಸಾಕಷ್ಟು ಆಳವಾಗಿ ಅದರ ಬಗ್ಗೆ ವಿಚಾರವನ್ನೇ ಮಾಡಿಲ್ಲ. ಹೀಗೆನ್ನುವಾಗ ನನಗೆ ದುಃಖವಾಗುತ್ತದೆ. ಕೈನೂಲಿನ ಬಗ್ಗೆ ಆಗಾಗ ಕೆಲವು ತೀರ್ಮಾನಗಳು ಆಗಿವೆ. ಅವನ್ನು ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಸದಸ್ಯರೇ ಕಾರ್ಯಗತಗೊಳಿಸಿಲ್ಲ. ನಮ್ಮಲ್ಲಿ ಬಹುಜನಕ್ಕೆ ಅದರಲ್ಲಿ ನಂಬಿಕೆಯೇ ಇಲ್ಲ. ಪರಿಸ್ಥಿತಿ ಹೀಗಿರುವಾಗ ಕೈನೂಲಿನ ಕೆಲಸದಲ್ಲಿ ಚೈತನ್ಯಗೊಳಿಸುವ ಶಕ್ತಿ ಇಲ್ಲದ ಮೂಲಕ ಅದು ವಿಫಲವಾಯಿತು ಎಂದು ಹೇಳುವದು ನ್ಯಾಯಸಂಗತವಲ್ಲ. ಕೇವಲ ಮುದುಕರ ಉದ್ಯೋಗ ಇದು ಎನ್ನುವುದು ನಿಜಾಂಶಗಳನ್ನು ಅಲಕ್ಷಿಸಿದಂತೆ. ನೂಲಿನ ಗಿರಿಣಿ ಬೇರೆ ಏನೂ ಅಲ್ಲ. ಅದು ಅನೇಕ ರಾಟೆಗಳನ್ನು ಒಟ್ಟುಗೂಡಿಸಿದಂತೆ ಅವನ್ನು ಗಂಡಸರೇ ನಡೆಸುತ್ತಾರೆ. ಗಂಡಸಿನ ಯೋಗ್ಯತೆಗೆ ಕೆಲವು ಕೆಲಸ ತಕ್ಕುವಲ್ಲ ಎಂಬ ಈ ಭ್ರಾಂತಿ ಹೋಗಬೇಕಾದ ಕಾಲ ಈಗ ಬಂದಿದೆ. ಸಾಧಾರಣ ಪರಿಸ್ಥಿತಿಯಲ್ಲಿ ಕೈನೂಲಿನ ಉದ್ಯೋಗವು ಮಹಿಳೆಯರದೇ ನಿಜ. ಆದರೆ ಮುಂದಿನ ರಾಜ್ಯ ಕೆಲವು ಗಂಡಸರನ್ನು ಯಾವಾಗಲೂ ರಾಟೆಯ ಉದ್ಯೋಗದಲ್ಲಿ ತೊಡಗಿಸಿಯೇ ಇರಬೇಕಾಗುತ್ತದೆ. ಇದು ಗೃಹೋದ್ಯೋಗ. ಆ ಚೌಕಟ್ಟಿನೊಳಗೆಯೇ ಸುಧಾರಣೆಗಳನ್ನು ಅವರು ಮಾಡಬೇಕು. ಈಗ ರಾಟೆಯಲ್ಲಿ ಆಗಿರುವ ಸುಧಾರಣೆಯು ಗಂಡಸರು ನಾವು ಕೆಲವರು ಅದನ್ನು ತಿರುಗಿಸದೇ ಇದ್ದಿದ್ದರೆ, ಅದರ ಬಗ್ಗೆ ಹಗಲೂ ರಾತ್ರಿಯೂ ಯೋಚಿಸದೇ ಇದ್ದಿದ್ದರೆ ಸಾಧ್ಯವಾಗುತ್ತಿರಲಿಲ್ಲ.

**ಯಂತ್ರಗಳು:**

ಯಂತ್ರಗಳ ವಿಷಯದಲ್ಲಿ ನನ್ನವು ಎಂದು ಹೇಳಲಾದ ಅಭಿಪ್ರಾಯಗಳನ್ನು ನೀವು ನಿಮ್ಮ ಮನಸ್ಸಿನಿಂದ ತೆಗೆದುಹಾಕಬೇಕೆಂದು ನನ್ನ ಅಪೇಕ್ಷೆ. ಯಾವ ಪ್ರಕಾರ ನಾನು ಸಮಗ್ರ ಅಹಿಂಸಾ ಸಿದ್ಧಾಂತವನ್ನು ರಾಷ್ಟವು ಒಮ್ಮನಸ್ಸಿನಿಂದ ಹೇಳುತ್ತಿಲ್ಲವೋ ಅದೇ ಪ್ರಕಾರ, ಯಂತ್ರಗಳ ಬಗ್ಗೆ ಸಹ ನನ್ನ ಅಭಿಪ್ರಾಯಗಳೆಲ್ಲವನ್ನೂ ರಾಷ್ಟವು ಒಪ್ಪಿಕೊಳ್ಳಬೇಕೆಂದು ಪ್ರಯತ್ನಿಸುತ್ತಿಲ್ಲ. ರಾಟೆಯೇ ಒಂದು ಸೊಗಸಾದ ಯಂತ್ರ ಇದನ್ನು ಕಂಡುಹಿಡಿದ ಆ ಅಜ್ಞಾತ ಶೋಧಕನಿಗೆ ಗೌರವಪೂರ್ಣವಾಗಿ ನನ್ನ ತಲೆ ಪ್ರತಿನಿತ್ಯವೂ ಬಾಗುತ್ತದೆ. ನಮ್ಮ ದೇಶ ಬಹಳ ವಿಸ್ತಾರವಾದುದು. 1900 ಮೈಲಿ ಉದ್ದ 1500 ಮೈಲಿ ಅಗಲ. ಇದರಲ್ಲಿ ಅಲ್ಲಿ ಇಲ್ಲಿ ಎಲ್ಲೆಲ್ಲೋ ದೂರ ದೂರ ಹರಡಿರುವ ಮನೆಗಳಲ್ಲಿ ಹಸಿವಿನ ಬಾಧೆ ತಗಲದಂತೆ ಕಾಪಾಡಲು ಆಧಾರವಾದ ಈ ಒಂದೇ ಒಂದು ಗೃಹ ಉದ್ಯೋಗವನ್ನು ಉದ್ದೇಶಪೂರ್ವಕವಾಗಿ ನಾಶಗೊಳಿಸಿದರು. ಅದರ ಬಗ್ಗೆ ನನಗೆ ಅಸಮಾಧಾನ.

**ನೂಲಿನ ಮತಾಧಿಕಾರ :**

ರಾಟೆಯ ಬಗ್ಗೆ ನನಗಿರುವ ಈ ಅನುರಾಗವನ್ನು ನೋಡಿ. ಅಥವಾ ನಮ್ಮ ಚುನಾವಣೆಯ ಮತಾಧಿಕಾರದಲ್ಲಿ ಇದನ್ನು ಸೇರಿಸುವ ಸಾಹಸವನ್ನು ನೋಡಿ ಈಗ ನಿಮಗೆ ಆಶ್ಚರ್ಯವಾಗದು. ಪಂಡಿತ್ ಮೋತಿಲಾಲ ನೆಹರು ಹಾಗೂ ದೇಶಬಂಧು ದಾಸರು ಸ್ವರಾಜ್ಯ ಪಕ್ಷದ ಪರವಾಗಿ ಇದನ್ನು ಏಕೆ ಒಪ್ಪಿಕೊಂಡರು ಎಂಬ ಬಗ್ಗೆಯೂ ನಿಮಗೆ ಆಶ್ಚರ್ಯವಾಗದು. ನನ್ನ ಮಾತೇ ನಡೆಯಬೇಕು ಎಂದಿದ್ದರೆ, ಕಾಂಗ್ರೆಸ್ಸಿನ ಪಟ್ಟಿಯಲ್ಲಿ ನೂಲಲು ಇಷ್ಟ ಇಲ್ಲದವರು

ಅಥವಾ ಯಾವಾಗಲೂ ಖಾದಿಯನ್ನು ಧರಿಸದವರು ಒಬ್ಬರೂ ಇರುತ್ತಿರಲಿಲ್ಲ. ಸ್ವರಾಜ್ಯ ಪಕ್ಷವು ಎಷ್ಟು ಒಪ್ಪಿಕೊಂಡಿದೆಯೋ ಅಷ್ಟಕ್ಕೆ ನಾನು ಕೃತಜ್ಞ . ಈ ತಿದ್ದುಪಡಿಯಾಗಲೀ ಸುಧಾರಣೆಯಾಗಲೀ ನಮ್ಮ ದೌರ್ಬಲ್ಯಕ್ಕೆ ಅಥವಾ ಶ್ರದ್ಧಾಹೀನತೆಗೆ ಒಂದು ರಿಯಾಯಿತಿ. ಆದರೆ ಯಾರಿಗೆ ರಾಟೆಯಲ್ಲಿ ಖಾದಿಯಲ್ಲಿ ಪೂರ್ಣ ನಂಬಿಕೆ ಇದೆಯೋ ಅವರಿಗೆ ಇದರಿಂದ ಹೆಚ್ಚು ಹೆಚ್ಚು ಸ್ಫೂರ್ತಿ ಬರುವಂತೆ ಆಗಬೇಕು. ಮತ್ತಾವ ಸಂದೇಶವೂ ಇಲ್ಲ.

ರಾಟೆಯ ಬಗ್ಗೆ ಇಷ್ಟು ಹೊತ್ತು ನಾನು ಹೇಳಿದೆ. ವಿಸ್ತಾರವಾಗಿಯೂ ಹೇಳಿದೆ. ಕಾರಣ ಇದಕ್ಕಿಂತ ಉತ್ತಮ ಸಂದೇಶ ಅಥವಾ ಬೇರೆ ಸಂದೇಶ ರಾಷ್ಟ್ರದ ಮುಂದೆ ಇಡಲಾರೆ. ಸ್ವರಾಜ್ಯ ಸಾಧನೆ ಶಾಂತಿಯುತ ಮತ್ತು ನ್ಯಾಯಸಮ್ಮತ ಮಾರ್ಗದಿಂದ ಆಗಬೇಕೆಂದರೆ ಅದಕ್ಕೆ ಇದಕ್ಕಿಂತ ಹೆಚ್ಚು ಔಚಿತ್ಯ ಸಾಧನೆ ನನಗೆ ಯಾವುದೂ ಗೊತ್ತಿಲ್ಲ. ಈಗಲೂ  ಕೂಡಾ ಹೇಳಿದ್ದೇನೆ. ಹಿಂಸೆಗೆ ಬದಲು ಇಡೀ ರಾಷ್ಟ್ರವು ಯಾವುದನ್ನಾದರೂ ಒಪ್ಪಿಕೊಳ್ಳಬೇಕಾಗಿದ್ದರೆ ಸವಿನಯ ಶಾಸನ ಭಂಗದಲ್ಲಿ ನನಗೆ ದೃಢ ವಿಶ್ವಾಸ. ಆದರೆ ಪರದೇಶೀವಸ್ತ್ರ ಬಹಿಷ್ಕಾರದ ಶಕ್ತಿ ನಮ್ಮಲ್ಲಿ ಮೂಡುವವರೆಗೆ  ಸ್ವರಾಜ್ಯ ಸಂಪಾದನೆಗಾಗಿ ಸವಿನಯ ಶಾಸನ ಭಂಗ ಅಸಾಧ್ಯ ಈಗ ನಿಮಗೆ ಸುಲಭವಾಗಿ ಅರ್ಥವಾಗಬಹುದು – ರಾಟೆಯ ಬಗ್ಗೆ ನನ್ನ ಅಭಿಪ್ರಾಯಗಳನ್ನು ನೀವು ಅಂಗೀಕರಿಸದೆ ಇದ್ದರೆ ನನ್ನಿಂದ ಕಾಂಗ್ರೆಸಿಗೆ ಯಾವ ಮಾರ್ಗದರ್ಶನವೂ ಇಲ್ಲ . ರಾಟೆಯ ಹಿನ್ನೆಲೆಯಲ್ಲಿ ಈ ಸಿದ್ಧಾಂತವನ್ನು ನಾನು ಪ್ರತಿಪಾದಿಸಿದ್ದು ತಪ್ಪು ಎನಿಸಿ, ನಿಮಗೆ ರಾಷ್ಟ್ರೀಯ ಪ್ರಗತಿಗೆ ನಾನು ಅಡ್ಡ ಎಂದು ನೀವು ಭಾವಿಸಿದರೆ, ಅದು ನ್ಯಾಯವೇ. ಕೆಲವು ಗೆಳೆಯರು ಹಾಗೆ ತಿಳಿದೂ ಇದ್ದಾರೆ. ನಿಮ್ಮ ಬುದ್ಧಿಗೂ ನಿಮ್ಮ ಹೃದಯಕ್ಕೂ ಇದು ಒಪ್ಪಿಗೆ ಆಗದೇ ಹೋದರೆ, ನನ್ನ ನಾಯಕತ್ವವನ್ನು ನೀವು ತ್ಯಜಿಸಬೇಕಾದ್ದೇ. ಹಾಗೆ ಮಾಡದೆ ಹೋದರೆ ನೀವು ಕರ್ತವ್ಯಚ್ಯುತರಾಗುತ್ತೀರಿ . ಲಾರ್ಡ್ ಬಿಲಿಂಗಡನ್ ಒಮ್ಮೆ ನಮ್ಮ ಬಗ್ಗೆ ಬಹಳ ಯೋಗ್ಯ ಮಾತು ಹೇಳಿದ. ನಮಗೆ ಇಲ್ಲ ಎನ್ನುವ ಧೈರ್ಯ ಮತ್ತು ಶಕ್ತಿ ಸಾಲದು ಎಂದು . ಇನ್ನು ಮುಂದೆ ಅಂಥ ಪ್ರಸಂಗ ಬರದಿರಲಿ. ನಿಮಗೆ ನಂಬಿಕೆ ಇಲ್ಲದಿದ್ದರೆ ನನ್ನ ಸೂಚನೆಯನ್ನು ನೀವು ತಿರಸ್ಕರಿಸುವುದೇ ಸ್ವರಾಜ್ಯ ಪ್ರಾಪ್ತಿಗೆ ನೀವು ಇಟ್ಟ ಮೊದಲನೆಯ ಹೆಜ್ಜೆ ಎನ್ನುತ್ತೇನೆ.

**ಹಿಂದೂ ಮುಸ್ಲಿಂ  ಐಕ್ಯ :**

ಹಿಂದೂ ಮುಸ್ಲಿಂ ಐಕ್ಯ ರಾಟೆಗಿಂದ ಕಡಿಮೆ ಮಹತ್ವದ್ದಲ್ಲ . ಬಾಳಿನ ಉಸಿರು ಅದು. ಈ ವಿಷಯವಾಗಿ ನಿಮ್ಮ ಹೊತ್ತನ್ನು ನಾನು ಹೆಚ್ಚು ಕಳೆಯಬೇಕಾಗಿಲ್ಲ. ಸ್ವರಾಜ್ಯಕ್ಕೆ ಇದು ಅಗತ್ಯವೆಂಬುದು  ಬಹಳ ಮಟ್ಟಿಗೆ ಸಾರ್ವತ್ರಿಕವಾಗಿ ಒಪ್ಪಿಗೆಯಾಗಿದೆ. 'ಬಹಳಮಟ್ಟಿಗೆ'  ಎಂದದ್ದು ಏಕೆ ಎಂದರೆ, ಕೆಲವರು ಹಿಂದೂಗಳು ಕೆಲವರು ಮುಸಲ್ಮಾನರು ಸಂಪೂರ್ಣವಾಗಿ ಹಿಂದೂ ಭಾರತ ಅಥವಾ ಮುಸಲ್ಮಾನ ಭಾರತ ಆಗದೇ ಇದ್ದರೆ ಈಗಿನ ಹಾಗೆ ಬ್ರಿಟನ್ನಿನ ಆಶ್ರಯವೇ ಇರಲಿ ಎನ್ನುತ್ತಾರೆ. ಹಾಗೆ ಹೇಳುವವರ ಸಂಖ್ಯೆ ಬಹಳ ಕಡಿಮೆ ಎಂಬುದು ಸಂತೋಷದ ವಿಷಯ.

ಮೌಲಾನಾ ಶೌಕತ್ ಆಲಿಗೆ ಬಹಳ ಪ್ರಬಲವಾದ ಆಶಾಭಾವನೆ. ಈಗಿನ ಈ ವಿರಸವು ತಾತ್ಕಾಲಿಕ ಎನ್ನುತ್ತಾರೆ. ನನಗೂ ಹಾಗೆಯೇ ಅನ್ನಿಸುತ್ತದೆ. ಹಿಂದೂಗಳೂ ಭಾಗವಹಿಸಿದ   ಖಿಲಾಫತ್ ಚಳವಳಿ, ಇದರ ಬಗ್ಗೆ ಬಂದ ಅಸಹಕಾರ, ಇದುವರೆಗೆ ನಿದ್ದೆ ಮಾಡುತ್ತಿದ್ದ ಜನತೆಯನ್ನು ಎಚ್ಚರಿಸಿದವು. ಮೇಲಿನ ವರ್ಗಕ್ಕೂ ಕೆಳಗಿನ ವರ್ಗಕ್ಕೂ ಇದು ಒಂದು  ಜಾಗೃತಿಯನ್ನು ಕೊಟ್ಟಿತು. ಅಸಹಕಾರದ ಉತ್ಕರ್ಷದ ದಿನಗಳಲ್ಲಿ ನಿರಾಶೆಗೊಂಡಿದ್ದ ಸ್ವಾರ್ಥಿಗಳು ಈಗ ಹೊಸತನದ ಆಕರ್ಷಣೆ ಕಡಿಮೆಯಾದ ಮೇಲೆ ಅವಕಾಶ ಪಡೆದು ಎರಡೂ ಸಮಾಜಗಳ ಸ್ವಾರ್ಥವನ್ನು ಅಥವಾ ಮತಾಂಧತೆಯನ್ನು ದುರುಪಯೋಗ ಪಡಿಸಿಕೊಳ್ಳುತ್ತಿದ್ದಾರೆ. ಕಳೆದ ಎರಡು ವರ್ಷಗಳ ಜಗಳಗಳು ಅದರ ಫಲ. ಧರ್ಮವನ್ನು ವಿದ್ರೂಪಗೊಳಿಸಿ ಅಪಹಾಸ್ಯಗೊಳಿಸಲಾಗಿದೆ . ಈ ಕ್ಷುಲ್ಲಕ ವಿಷಯಗಳನ್ನು ಧರ್ಮದ ಹೆಸರಿನಲ್ಲಿ ದೊಡ್ಡದು ಮಾಡಿದ್ದಾರೆ. ಏನು ಬೇಕಾದರೂ ಆಗಲಿ ಅದನ್ನು ನಡೆಸಿಯೇ ತೀರಬೇಕು ಎನ್ನುತ್ತಾರೆ ಮತಾಂಧರು. ವಿರಸ ಹುಟ್ಟಿಸಲು ಆರ್ಥಿಕ ರಾಜಕೀಯ ಕಾರಣಗಳನ್ನು ಉಪಯೋಗಿಸಿಕೊಳ್ಳುತ್ತಿದ್ದಾರೆ. ಇದು ಕೋಹಾಟನಲ್ಲಿ ಶಿಖರಕ್ಕೆ ಮುಟ್ಟಿತು. ಮೊದಲೇ ದುರಂತ. ಆ ಬೆಂಕಿಗೆ ಸ್ಥಳೀಯ "ಅಧಿಕಾರಿಗಳ ಹೃದಯಹೀನ ಔದಾಸೀನ್ಯದಿಂದ "ತುಪ್ಪ ಸುರಿದಂತಾಯಿತು. ಆ ದುರಂತದ ಕಾರಣಗಳನ್ನು ಪರಿಶೀಲಿಸಲು ಅಥವಾ ಅಪರಾಧವನ್ನು ನಿಷ್ಕರ್ಷಿಸಲು ನಾನು ಇಲ್ಲಿ ತೊಡಗುವದಿಲ್ಲ. ನನಗೆ ಒಂದು ವೇಳೆ ಮನಸ್ಸಿದ್ದರೂ ಅದಕ್ಕೆ ಬೇಕಾದ ಸಾಮಗ್ರಿ ಇಲ್ಲ. ಇಷ್ಟು ಹೇಳಿದರೆ ಸಾಕು. ಹಿಂದೂ ಶರಣಾರ್ಥಿಗಳು ಪ್ರಾಣಭಯದಿಂದ ಓಡಿಹೋದರು.

ಕೋಹಾಟನಲ್ಲಿ ಮುಸಲ್ಮಾನರ ಸಂಖ್ಯೆ ಅತ್ಯಧಿಕ. ಪರದೇಶೀಯ ಪ್ರಭುತ್ವದಲ್ಲಿ ಎಷ್ಟು ಸಾಧ್ಯವೋ ಅಷ್ಟು ಸಹಜ ಅಧಿಕಾರ ಅವರ ಕೈಯ್ಯಲ್ಲಿದೆ. ಕೋಹಾಟನ ಸಂಪೂರ್ಣ ಜನ ಹಿಂದೂಗಳೇ ಆಗಿದ್ದ ಪಕ್ಷದಲ್ಲಿ ಅಲ್ಲಿ ಎಷ್ಟು ಸುರಕ್ಷಿತವಾಗಿ ಇರಬಹುದಾಗಿತ್ತೋ ಅಷ್ಟೇ ಸುರಕ್ಷಿತವಾಗಿ ಮುಸಲ್ಮಾನರು ಬಹುಸಂಖ್ಯಾತರಾಗಿ ಇದ್ದಾಗ ಕೂಡ ಅವರು ಇರಬಲ್ಲರು ಎಂಬುದನ್ನು ತೋರಿಸ ಕೊಡುವದು ಮುಸಲ್ಮಾನರ ಕರ್ತವ್ಯ. ಹಿಂದೂ ಶರಣಾರ್ಥಿಗಳು ಪ್ರತಿಯೊಬ್ಬರೂ ಊರಿಗೆ ಬರುವಂತೆ ಮಾಡುವವರೆಗೂ ಮುಸಲ್ಮಾನರು ಸುಮ್ಮನೆ ಇರಲಾಗದು. ಸರಕಾರ ಒಡ್ಡಿದ ಬೋನಿನಲ್ಲಿ ಹಿಂದೂಗಳು ಬೀಳಬಾರದು ಎಂದು ನಾನು ಆಶಿಸುತ್ತೇನೆ .ತಮ್ಮ  ಪೂರ್ಣ ಸೊತ್ತುಗಳ ಬಗ್ಗೆ ಕೋಹಾಟ ಮುಸಲ್ಮಾನರು ಪೂರ್ಣ ಭರವಸೆ ಕೊಡುವವರೆಗೆ ಹಿಂದೂ ಶರಣಾರ್ಥಿಗಳು ಇದಕ್ಕೆ ದೃಢವಾಗಿ ತಿರಸ್ಕರಿಸಬೇಕು ಎನ್ನುತ್ತೇನೆ.

ಎಲ್ಲಿ ಮುಸಲ್ಮಾನರ ಸಂಖ್ಯೆ ಅತ್ಯಧಿಕವಾಗಿರುತ್ತದೆಯೋ  ಅವರ ನಡುವೆ ಹಿಂದೂಗಳು ಇರಬೇಕೆಂದರೆ ಮುಸಲ್ಮಾನರು ಅವರನ್ನು ಸ್ವಂತ ತಮ್ಮ ಗೆಳೆಯರಂತೆ ಸಮಾನರಂತೆ ನೋಡುವ ಸಂದರ್ಭ ಇರಬೇಕು. ಮುಸಲ್ಮಾನರು ಕಡಿಮೆ ಸಂಖ್ಯೆ ಇರುವ ಕಡೆಯೂ ಅಷ್ಟೇ. ಹಿಂದೂಗಳು ಹೆಚ್ಚಾಗಿ ಇರುವ ಕಡೆ, ಅವರ ನಡುವೆ ಇವರು ಗೌರವದಿಂದ ಬಾಳಬೇಕೆಂದರೆ ಹಿಂದೂಗಳ ಸ್ನೇಹ ಅತ್ಯಗತ್ಯ. ಸರಕಾರ ಕಳ್ಳಕಾಕರ ದರೋಡೆಕಾರರ ವಿರುದ್ಧ ರಕ್ಷಣೆ ಕೊಡಬಹುದು.

ಆದರೆ ಒಂದು ಇಡೀ ಸಮಾಜ ಇನ್ನೊಂದು ಸಮಾಜವನ್ನು ಸಂಪೂರ್ಣವಾಗಿ ಬಹಿಷ್ಕರಿಸಿದರೆ ಅದಕ್ಕೆ ರಕ್ಷಣೆ ಕೊಡಲು ಸ್ವರಾಜ್ಯ ಸರಕಾರಕ್ಕೂ ಸಾಧ್ಯವಿಲ್ಲ. ಸರಕಾರ ಅಸಾಧಾರಣ ಪರಿಸ್ಥಿತಿಯಲ್ಲಿ ಮಾತ್ರ ಕೈಹಾಕಬಹುದು. ಜಗಳ ಆಡುವುದೇ  ಸಹಜವಾಗಿಬಿಟ್ಟರೆ ಅದು ಅಂತಃಕಲಹ. ಆಯಾ ಗುಂಪುಗಳು ಕಲಹ ಮೂಲಕವೇ ಸಮಸ್ಯೆಗಳನ್ನು ತೀರ್ಮಾನಮಾಡಿಕೊಳ್ಳಬೇಕು.

ಈಗಿನ ಸರಕಾರ ಪರದೇಶಿ. ಆದ್ದರಿಂದ

ಇದು ಪ್ರಚ್ಛನ್ನ ಸೈನಿಕ ಆಡಳಿತ. ನಾವು ಎಷ್ಟೇ ಸಂಘಟಿತರಾದರೂ ತನ್ನನ್ನು ಕಾಪಾಡಿಕೊಳ್ಳುವ ಶಕ್ತಿ ಸರಕಾರಕ್ಕಿದೆ. ಆದ್ದರಿಂದಲೇ ಅದಕ್ಕೆ ಮನಸ್ಸಿದ್ದರೆ ನಮ್ಮ ಈ ಅಂತಃಕಲಹವನ್ನು ತಡೆಗಟ್ಟಬಹುದು. ಆದರೆ ಜನಪ್ರಿಯ ಎನ್ನಿಸಿಕೊಳ್ಳಬಯಸಿದ ಯಾರ ಸ್ವರಾಜ್ಯ ಸರಕಾರವೂ ಯಾವಾಗಲೂ ಯುದ್ಧ ಸಿದ್ಧತೆಯಲ್ಲಿ ಇರಲಾರದು. ಸ್ವರಾಜ್ಯ ಸರಕಾರ ಎಂದರೆ ಹಿಂದೂಗಳ ಮುಸಲ್ಮಾನರ ಹಾಗೂ ಇತರರ ಸ್ವತಂತ್ರ ಸಾಮುದಾಯಿಕ ಇಚ್ಛೆಯಿಂದ ಸ್ಥಾಪಿತವಾದದ್ದು. ಹಿಂದೂಗಳಿಗೆ ಮುಸಲ್ಮಾನರಿಗೆ ಸ್ವರಾಜ್ಯ ಬೇಕಾದರೆ ತಮ್ಮ

ತಮ್ಮ ಭಿನ್ನಾಭಿಪ್ರಾಯಗಳನ್ನು ಅವರು ಸ್ನೇಹದಿಂದ ಬಗೆಹರಿಸಿಕೊಳ್ಳಬೇಕು.

ದಿಲ್ಲಿಯಲ್ಲಿ ನಡೆದ ಐಕ್ಯತಾ ಸಮ್ಮೇಲನವು ಮತೀಯ ಭಿನ್ನತೆಗಳ ಪರಿಹಾರಕ್ಕೆ ದಾರಿಮಾಡಿದೆ. ಹಿಂದೂಗಳಿಗೂ, ಮುಸಲ್ಮಾನರಿಗೂ ಅಷ್ಟೇ ಅಲ್ಲ–ಎಲ್ಲ ಜಾತಿಗಳಿಗೂ ಪಂಥಗಳಿಗೂ ಇರುವ ರಾಜಕೀಯ ಭೇದಗಳನ್ನು ನ್ಯಾಯವಾಗಿ ಪರಿಹರಿಸಲು ಸರ್ವಪಕ್ಷ ಪರಿಷತ್ತಿನ ಸಮಿತಿಯು ಒಂದು ಮಾರ್ಗವನ್ನು ಜುಜಬಿ ಮತೀಯ ಪಂಥೀಯ ಪ್ರಾಂತೀಯ ಪ್ರಾತಿನಿಧ್ಯವನ್ನು ಆದಷ್ಟು ಬೇಗ ತೆಗೆದು ಹಾಕುವುದು ನಮ್ಮ ಗುರಿಯಾಗಬೇಕು. ಮತದಾರ ವರ್ಗವು ಸಕಲರದೂ ಆಗಿ ಕೇವಲ ಯೋಗ್ಯತೆಯ ಆಧಾರದ ಮೇಲೆ ನಿಷ್ಪಕ್ಷಪಾತವಾಗಿ ತಮ್ಮ ಪ್ರತಿನಿಧಿಗಳನ್ನು ಆರಿಸಬೇಕು. ನಮ್ಮ ನೌಕರ ವರ್ಗದಲ್ಲಿ ಹಾಗೆಯೇ ನಿಷ್ಪಕ್ಷಪಾತವಾಗಿ ಕೆಲವು ಅರ್ಹತೆಯ ಆಧಾರದ ಮೇಲೆ ಗಂಡಸರನ್ನು, ಹೆಂಗಸರನ್ನು ನಿಯಮಿಸಿಕೊಳ್ಳಬೇಕು. ಆದರೆ ಆ ಕಾಲ ಬರುವವರೆಗೆ ಮತೀಯ ದ್ವೇಷ , ಅಸೂಯೆಗಳು ಪಕ್ಷಪಾತಗಳು ಗತಕಾಲದವು ಎನಿಸಿಕೊಳ್ಳುವವರೆಗೆ ಬಹುಸಂಖ್ಯೆಯ ಜನರ ಉದ್ದೇಶಗಳನ್ನು ಶಂಕಿಸುವ ಅಲ್ಪ ಸಂಖ್ಯಾತರಿಗೂ ಅವರ ದಾರಿಯಲ್ಲಿ ಸ್ಪಷ್ಟತೆ ಇರಬೇಕು. ಬಹುಸಂಖ್ಯೆಯ ಜನರು ತ್ಯಾಗದ ದಾರಿ ತೋರಬೇಕು.

**ಅಸ್ಪೃಶ್ಯತೆ:**

ಸ್ವರಾಜ್ಯಕ್ಕೆ ಮತ್ತೊಂದು ಆತಂಕ ಅಸ್ಪೃಶ್ಯತೆ . ಅದರ ನಿವಾರಣೆ ಸ್ವರಾಜ್ಯಕ್ಕೆ ಅತ್ಯಗತ್ಯ. ಹಿಂದೂ ಮುಸ್ಲಿಂ ಹೇಗೋ ಇದು ಹಾಗೆಯೇ ಸ್ವರಾಜ್ಯಪ್ರಾಪ್ತಿಗೆ ಅಗತ್ಯ. ಮುಖ್ಯವಾಗಿ ಇದು ಹಿಂದೂಗಳ ಸಮಸ್ಯೆ . ಈ ದಲಿತವರ್ಗಗಳಿಗೆ ಸ್ವಾತಂತ್ರ್ಯವನ್ನು



ನೀಡುವವವರೆಗೆ ಮತ್ತೆ ಹಿಂದೂಗಳು ಸ್ವರಾಜ್ಯವನ್ನು ಕೇಳಲು ಹಕ್ಕಿಲ್ಲ, ಪಡೆಯಲು ಸಾಧ್ಯವಿಲ್ಲ ಅವರನ್ನು ತುಳಿತುಳಿದು ನಾವೂ ಅಧಃಪತನ ಹೊಂದಿದ್ದೇವೆ. ಇಂಗ್ಲೀಷ್ ಆಕ್ರಮಣಕಾರರು ನಮ್ಮನ್ನು ಹೇಗೆ ನಡೆಸಿ ಕೊಳ್ಳುತ್ತಾರೆಯೋ ಅದಕ್ಕಿಂತ ಹೀನವಾಗಿ ಅಲ್ಲದಿದ್ದರೂ ಅಷ್ಟೇ ಹೀನವಾಗಿ ಹಿಂದುಸ್ತಾನದ ಮೂಲ ನಿವಾಸಿಗಳನ್ನು ಆರ್ಯರ ದಾಳಿಕಾರರು ನಡೆಸಿಕೊಂಡರು ಎಂದು ಇತಿಹಾಸ ಬಲ್ಲವರು ಹೇಳುತ್ತಾರೆ. ಹಾಗೆ ಒಂದು ಅಸ್ಪೃಶ್ಯರ ವರ್ಗವನ್ನು ನಿರ್ಮಿಸಿದ್ದಕ್ಕಾಗಿ ಈಗ ಗುಲಾಮಗಿರಿಯ ರೂಪದ ಪ್ರತಿಫಲವನ್ನು ನಾವು ಅನುಭವಿಸುತ್ತಿದ್ದೇವೆ. ಈ ಕಳಂಕವನ್ನು ಎಷ್ಟು ಬೇಗ ತೊಳೆದು ಹಾಕಿದರೆ ಅಷ್ಟು ಹಿ0ದೂಗಳಿಗೆ ಒಳ್ಳೆಯದು. ಆದರೆ ಅಸ್ಪೃಶ್ಯತೆಯು ದೈವನಿರ್ಮಿತವೆಂದು ಪಂಡಿತರೂ ಪುರೋಹಿತರೂ ಹೇಳುತ್ತಾರೆ. ಹಿಂದೂ ಧರ್ಮದ ಬಗ್ಗೆ ನನಗೂ ಸ್ವಲ್ಪ ಗೊತ್ತಿದೆ. ಈ ಪಂಡಿತರದು ಶುದ್ಧ ತಪ್ಪು ಎಂದು ನನ್ನ ದೃಢ ಅಭಿಪ್ರಾಯ.

"ಭಗವಂತ ಮಾನವಕುಲದ ಒಂದು ಭಾಗವನ್ನು ಅಸ್ಪೃಶ್ಯ ಎಂದು ಬೇರೆ ಮಾಡಿದ " ಎಂಬ ಮಾತು ದೈವದ್ರೋಹ. ಕಾಂಗ್ರೆಸ್ಸಿಗರಾದ ಹಿಂದೂಗಳು ಆದಷ್ಟು ಬೇಗ ಈ ಆತಂಕವನ್ನು ತೆಗೆದು ಹಾಕಬೇಕು. ವೈಕೋಮ್ ಸತ್ಯಾಗ್ರಹಿಗಳು ನಮಗೆ ದಾರಿತೋರಿಸುತ್ತಿದ್ದಾರೆ. ಸಜ್ಜನಿಕೆಯಿಂದಲೂ ದೃಢತೆಯಿಂದಲೂ ಸೌಮ್ಯದಿಂದಲೂ ಅವರು ತಮ್ಮ ಹೋರಾಟ ನಡೆಸುತ್ತಿದ್ದಾರೆ. ಅವರಿಗೆ ಸಹನೆ ಇದೆ, ಧೈರ್ಯ ಇದೆ, ಶ್ರದ್ಧೆ ಇದೆ. ಈ ಗುಣಗಳು ಯಾವ ಚಳವಳಿಯಲ್ಲಿ ಇದ್ದರೂ ಅದು ಅಪ್ರತಿಮವಾಗುತ್ತದೆ; ಅದನ್ನು ತಡೆಯಲು ಸಾಧ್ಯವಿಲ್ಲ.

ಆದರೆ ಈಚೆಗೆ ಒಂದು ಮಾತು ಪ್ರಾರಂಭವಾಗಿದೆ .ರಾಜಕೀಯ ಗುರಿಗಳನ್ನು ಸಾಧಿಸಲು ದಲಿತವರ್ಗವನ್ನು ಉಪಯೋಗಿಸಿಕೊಳ್ಳುತ್ತಿದ್ದಾರೆ. ಈ ಬಗ್ಗೆ ಹಿಂದೂಗಳಿಗೆ ನಾನು ಎಚ್ಚರಿಕೆ ಕೊಡಬಯಸುತ್ತೇನೆ. ಅಸ್ಪೃಶ್ಯತಾ ನಿವಾರಣೆ ಒಂದು ಪ್ರಾಯಶ್ಚಿತ್ತ. ಸವರ್ಣ ಹಿಂದೂಗಳು ತಮಗೂ ಹಿಂದೂಧರ್ಮಕ್ಕೂ ಪ್ರಾಯಶ್ಚಿತ್ತ ಮೂಲಕ ಋಣ ಮುಕ್ತರಾಗ ಬೇಕು .

ನಿಜವಾಗಿ ಅಸ್ಪೃಶ್ಯರು ಶುದ್ಧರಾಗಬೇಕಾದ್ದಿಲ್ಲ. ಶುದ್ಧರಾಗಬೇಕಾದವರು ಮೇಲಿನ ಜಾತಿಯವರು . ಅಸ್ಪೃಶ್ಯರಿಗೆ

ಪಾಪ ಯಾವುದೂ ಇಲ್ಲ, ಹೊಲಸು, ಅನೈರ್ಮಲ್ಯ ಅವರಿಗೇ ಮೀಸಲಿಲ್ಲ . ನಮ್ಮ ದುರಹಂಕಾರವು ನಮ್ಮ ಕಣ್ಣೊಳಗೆ ಪರೆಕಟ್ಟಿ, ನಮ್ಮ ತಪ್ಪುಗಳನ್ನು ಮಾಡಿಸುತ್ತವೆ .ಆ ಅಹಂಕಾರವೇ ನಾವು ತುಳಿದ , ತುಳಿಯುತ್ತಿರುವ ದಲಿತ ಸಹೋದರರ ಅಲ್ಪದೋಷಗಳನ್ನು ಗುಡ್ಡದ ಹಾಗೆ ಕಾಣುವಂತೆ ಮಾಡುತ್ತದೆ. ರಾಷ್ಟಗಳಿಗೆ ಹೇಗೋ ಧರ್ಮಗಳಿಗೂ ಹಾಗೇಯೇ ಇದು ಪರೀಕ್ಷಾ ಸಮಯ. ದೇವರ ಅನುಗ್ರಹವು, ದೇವರ ಸಾಕ್ಷಾತ್ಕಾರವು ಯಾವ ಜಾತಿಗೂ ಯಾವ ರಾಷ್ಟಕ್ಕೂ ಗುತ್ತಿಗೆಯಲ್ಲ. ದೇವರಲ್ಲಿ ಶ್ರದ್ಧೆ ಇಟ್ಟು ಅವನ ಬಾಗಿಲು ಕಾಯುವವರೆಲ್ಲರಿಗೂ ಸಮಾನವಾಗಿ ಅದು ಲಭಿಸುತ್ತದೆ. ಯಾವ ರಾಷ್ಟ ಯಾವ ಮತ, ಅನ್ಯಾಯಕ್ಕೆ, ಅಸತ್ಯಕ್ಕೆ, ಹಿಂಸೆಗೆ ಮಡಿಲು ಕಟ್ಟುತ್ತದೆಯೋ ಅದು ಈ ಭೂಮಿಯಿಂದ ಮಾಯವಾಗುತ್ತದೆ. ತರು ಪ್ರಕಾಶ, ಅಂಧಕಾರವಲ್ಲ. ದೇವರು ಪ್ರೇಮ; ದ್ವೇಷವಲ್ಲ. ದೇವರು ಸತ್ಯ ; ಅಸತ್ಯವಲ್ಲ. ದೇವರು ಒಬ್ಬನೇ ಶ್ರೇಷ್ಠ, ಅವನು ಸೃಷ್ಟಿಸಿದ ನಾವು ಬರೀ ಮಣ್ಣು. ಅವನ ಸೃಷಿಯಲ್ಲಿನ ತೀರ ಕಟ್ಟಕಡೆಯ ಪ್ರಾಣಿಯನ್ನು ಗುರುತಿಸಿಕೊಳ್ಳೋಣ. ಸುದಾಮನು ಚಿಂದಿ ಉಟ್ಟಿದ್ದರೂ ಕೃಷ್ಣ ಅವನನ್ನು ಗೌರವಿಸಿದ. ಅಷ್ಟು ಗೌರವ ಬೇರೆ ಯಾರಿಗೂ ತೋರಲಿಲ್ಲ. ಧರ್ಮದ ಅಥವಾ ತ್ಯಾಗದ ಬೇರು ಪ್ರೇಮ.

ಈ ನಾಶವಂತ ದೇಹವು ಎಲ್ಲ ಅಧರ್ಮಕ್ಕೂ ಎಲ್ಲ ಸ್ವಾರ್ಥಕ್ಕೂ ಮೂಲಕಾರಣ ಎಂದು ತುಳಸೀದಾಸರು ಅನ್ನುತ್ತಾರೆ. ಸ್ವರಾಜ್ಯವು ಬರಲಿ ಬಿಡಲಿ, ವೇದದ ತತ್ವವನ್ನು ಪುನರುಜ್ಜೀವನ ಗೊಳಿಸಿ ಅದನ್ನು ಜೀವಂತವಾಗಿ ಮಾಡುವ ಆಸೆ ಇದ್ದರೆ ಹಿಂದೂಗಳು ಮೊಟ್ಟ ಮೊದಲು ತಮ್ಮನ್ನು ಶುದ್ಧೀಕರಿಸಿಕೊಳ್ಳಬೇಕು.

■



# ಚಂದದ ಬದುಕು

## ಅರಸೀಕೆರೆ ಮಕ್ಕಳ ಶಿಬಿರ

**ಕಸ್ತೂರ್ ಬಾ ಗಾಂಧಿ ಆಶ್ರಮ, ಅರಸೀಕೆರೆ । ದಿನಾಂಕ: ಏಪ್ರಿಲ್ 16,17,18 – 2024**
**ನಡೆಸಿಕೊಟ್ಟವರು: ತರಿಕಿಟ ಕಲಾ ಕಮ್ಮಟದ ತಂಡ ಶ್ವೇತಾ, ಚೈತ್ರಾ, ವಾಣಿ; ಮಮಿತಾ ಮತ್ತು ದೀಪಕ್ ಶ್ರೀನಿವಾಸನ್.**
**ಮಕ್ಕಳ ವಿವರ: 41 ಮಕ್ಕಳು ( ಆಶ್ರಮದಿಂದ 38+ ತುಮಕೂರು ಹಕ್ಕಿಪಕ್ಕ ಬಳಗ 2 + ಅರಸೀಕರೆ ಪಟ್ಟಣದಿಂದ 11)**



**ವಾಣಿ ಪೆರಿಯೋಡಿ**

**ಚಂ**ದದ ಬದುಕು ಹೆಸರಿನಲ್ಲಿ ನಡೆವ ಈ ಶಿಬಿರ 5 ನೇ ವರ್ಷಕ್ಕೆ ಬಂದಿದ್ದು ಬಹಳ ಸಂತೋಷದ ವಿಷಯ. ಸುಮಾರು 20ಮಂದಿ ಮಕ್ಕಳು ಎಲ್ಲಾ ಐದು ಶಿಬಿರಗಳಲ್ಲಿ ಭಾಗವಹಿಸಿದವರು ಇದ್ದರು. ಈ ಸಾರಿ ನಮ್ಮ ಮುಖ್ಯ ವಿಚಾರ ಇದ್ದುದೇ ಅನುಪಮಾ ಬರೆದ ಮೂರು ಪುಸ್ತಕಗಳ ಓದು. ಈ ಓದು ಗಂಭೀರ ವಿಷಯಗಳ ಸುತ್ತ ಮಾತುಕತೆ ಆಗುವಂತೆ ಪ್ರೇರೇಪಿಸಿತು.

**ಪ್ಲಾಸ್ಟಿಕ್ ಪರಿಸರ ಓದು ಮತ್ತು ಪೂರಕ ಚಟುವಟಿಕೆ:** ವಯಸ್ಸಿಗೆ ಅನುಗುಣವಾಗಿ ಮಕ್ಕಳ ನಾಲ್ಕು ಸಣ್ಣ ಗುಂಪು ಮಾಡಿ ಪುಸ್ತಕ ಓದು ನಡೆಸಿದೆವು. ಓದುವುದೆಂದರೆ ಇಷ್ಟ ಅಂತನಮ್ಮ ಎದುರಿಗೆ ಜೋರಾಗಿ ಹೇಳಿದರೂ ಓದುವುದು ಬೋರ್ ಅಂತ ಮಕ್ಕಳು ತಮ್ಮದೇ ರೀತಿಯಲಿ ಸೂಚಿಸಿದರು. ಓದುವುದರ ಮಹತ್ವದ ಬಗ್ಗೆ ವಿವರಿಸಿ, ಒಂದಷ್ಟು ಪುಸಲಾಯಿಸಿ ಓದಿಸಲು ತೊಡಗಿಸಿದ್ದೆವು. ನಡು ನಡುವೆ ಮಾತುಕತೆ ಮಾಡುತ್ತಾ ಓದು ನಡೆಯಿತು . ಅನೇಕರು ಮೊದಲೇ ಸ್ವಲ್ಪ ಮಟ್ಟಿಗೆ



ಓದಿಕೊಂಡಿದ್ದರು . ಹೊರಗಿನಿಂದ ಬಂದ ಮಕ್ಕಳು ಅಂದು ರಾತ್ರಿ ಮನೆಕೆಲಸದ ರೀತಿಯಲ್ಲಿ ಓದಿ ಮುಗಿಸಿದರು. ಚಿಕ್ಕ ಮಕ್ಕಳ ಗುಂಪಿಗೆ ಈ ಓದು ಸ್ವಲ್ಪ ಹೆಚ್ಚಾಗಿತ್ತು. ನಾವೇ ಕತೆ ತರಹ ವಿವರಿಸಿ ಕೆಲವು ಭಾಗಗಳನ್ನು ಮಾತ್ರ ಓದಿದೆವು .

ಓದಿದ ವಿಚಾರಗಳ ಸುತ್ತ ಚರ್ಚೆ ಮಾಡುತ್ತಾ, ಆಶ್ರಮದ ಗೋಡೆಯಲ್ಲಿ ಧಾರಾಳವಾಗಿ ಹಾಕಿರುವ ಗಾಂಧೀಜಿ ಚಿಂತನೆಗಳೊಂದಿಗೆ ಸಂಬಧವನ್ನು ಗುರುತಿಸಿದೆವು. ಪ್ಲಾಸ್ಟಿಕ್ ಅನ್ನುವುದರ ಹಿಂದೆ ಎಷ್ಟೊಂದು ಯೋಚನೆಗಳು ಇವೆ ಎಂಬುದು ಮಕ್ಕಳಿಗೆ ಸರಳವಾಗಿ ಅರ್ಥ ಮಾಡಿಸುವ ಪ್ರಯತ್ನ ಮಾಡಿದ್ದೆವು. ಗಾಂಧೀಜಿ ಸಾರುವ ಗ್ರಾಮ ಸ್ವರಾಜ್ಯ, ಅದರಜೊತೆಗೆ ಅವರು ಪ್ರತಿಪಾದಿಸುವ ಗುಡಿಕೈಗಾರಿಕೆಗಳ ಚಿತ್ರ ಪಟಗಳು ಅಲ್ಲಿಯೇ ಇದ್ದು ಅವನ್ನು ಗಮನಿಸಿ ಮಾತಾಡುವ ಹಾಗೆ ಆಯಿತು.

ಓದಿರುವ ಅನುಭವವನ್ನು ತಮ್ಮೊಳಗೆ ಗುರುತಿಸುತ್ತಾ ಸಂದೇಶದ ರೀತಿಯಲ್ಲಿ ಪ್ರತಿಯೊಬ್ಬರೂ ಒಂದೊಂದು ಪೋಸ್ಟರ್ ಮಾಡಿದರು. ಅವರವರದೇ ರೀತಿಯಲ್ಲಿ ಚೆನ್ನಾಗಿ ಅಭಿವ್ಯಕ್ತಿಸಿದರು . ಒಂದು ವಿಚಾರವನ್ನು ಇಟ್ಟುಕೊಂಡು ಸಂದೇಶ ನೀಡುವುದಕ್ಕಾಗಿ ಚಿತ್ರ ಮಾಡುವುದು ಅವರಿಗೆ ಹೊಸ ಅನುಭವ. ಹೊರಗಿನಿಂದ ಬಂದ ಮಕ್ಕಳಿಗೆ ಮೊಬೈಲ್ ನೋಡದೆ ತಮ್ಮದೇ ಆಲೋಚನೆಯಿಂದ ಚಿತ್ರ ಮಾಡುವ ಅನುಭವವೂ ವಿಶೇಷ ಅನಿಸಿತ್ತು.

ತುಮಕೂರಿನಿಂದ ಹಕ್ಕಿ ಪಕ್ಕ ಬಳಗದ ಮಕ್ಕಳಾದ ಪವಿತ್ರ ಮತ್ತು ಧನುಶ್ರೀ ಶಿಬಿರಕ್ಕೆ ಬಂದಿದ್ದರು. ಅವರು ತಮ್ಮ ಊರಿನಲ್ಲಿ ಪರಿಸರ ಸಂರಕ್ಷಣೆಗಾಗಿ ತಾವು ಮಾಡುವ ಕೆಲಸಗಳನ್ನು ವಿವರಿಸಿದರು. ಅರಣ್ಯ ಇಲಾಖೆಯವರು ಅಲ್ಲಿ ಇಲ್ಲಿ ಗಿಡಗಳನ್ನು ನೆಟ್ಟು ಬಿಡುತ್ತಾರೆ, ಆಮೇಲೆ ಗಿಡಗಳನ್ನು ಸಾಕುವ ಕಡೆ ಗಮನ ಕೊಡುವುದಿಲ್ಲ. ಅಂತಹ ಸುಮಾರು ಎರಡು ಸಾವಿರ ಗಿಡಗಳನ್ನು ಹಕ್ಕಿಪಕ್ಕ ಮಕ್ಕಳ ಗುಂಪು ಸಾಕಿ ಸಲಹಿ ದೊಡ್ಡದು ಮಾಡುತ್ತಿದ್ದಾರೆ. ಸುಸ್ಥಿರ ಬದುಕಿಗೆ ಅಗತ್ಯವಾದ ಮಾಹಿತಿಗಳನ್ನು ಕಿರು ವೀಡಿಯೋ ಮಾಡಿ ಪ್ರಸಾರ ಮಾಡುತ್ತಿದ್ದಾರೆ. ಇವರ ಮಾತುಗಳು ಇತರ ಮಕ್ಕಳಿಗೆ ನಿಜಕ್ಕೂ ವಿಶೇಷವಾಗಿತ್ತು. ಅಚ್ಚರಿತಂದಿತ್ತು.

ಇದಕ್ಕೆ ಪೂರಕವಾಗಿ ಮೂರನೆಯ ದಿನ ಆಶ್ರಮದ ಆವರಣದಲ್ಲಿ ಒಂದು ಗಂಟೆ ಕಾಲ ಎಲ್ಲರೂ ಸೇರಿ ಪ್ಲಾಸ್ಟಿಕ್ ಕಸ ಹೆಕ್ಕಿದೆವು. ಸುಮಾರು ಎಂಟು ಗೋಣಿ ಚೀಲಗಳಲ್ಲಿ ಕಸ ಸಿಕ್ಕಿತ್ತು. ಇಷ್ಟು ಚಿಕ್ಕಜಾಗದಲ್ಲಿ ಇಷ್ಟೊಂದು ಪ್ಲಾಸ್ಟಿಕ್ ಬಿದ್ದಿದ್ದರೆ ಇಡೀ ಕರ್ನಾಟಕದಲ್ಲಿ ಎಷ್ಟು ಬಿದ್ದಿರಬಹುದು ಎಂದು ಒಬ್ಬ ಹುಡುಗಿ ಅಚ್ಚರಿಯಿಂದ ಹೇಳಿದಳು. ಯಾರೋ ಚಾಕ್ಲೇಟ್ ತಂದು ಕೊಟ್ಟಾಗ 'ಅಯ್ಯೋ, ಮತ್ತೆ ಇದರಲ್ಲಿ ಪ್ಲಾಸ್ಟಿಕ್ ಇದೆ, ಏನು ಮಾಡೋದು , ಥಟ್ಟಂತ ಒಬ್ಬಳು ಹೇಳಿದಳು. ಸ್ವಲ್ಪ ಕಾಲ ಪುಟ್ಟ ಪುಟ್ಟ ತಲೆಗಳು ಪ್ಲಾಸ್ಟಿಕ್ ಮಯವಾಗಿದ್ದವು. ಕಸದ ರಾಶಿ ಹಾಕಿದ ಮೇಲಂತೂ ಇದನ್ನು ಏನು ಮಾಡುವುದು? ಎಂಬ ಪ್ರಶ್ನೆಬಹಳ ಕಾಡಿತು.

**ಸಾವಿತ್ರಿ ಬಾಯಿ ಫುಲೆ ಓದು ಮತ್ತು ಪೂರಕ ಚಟುವಟಿಕೆ:** ಎರಡನೆಯ ದಿನ ಸಾವಿತ್ರಿ ಬಾಯಿ ಫುಲೆ ಪುಸ್ತಕವನ್ನು ಅದೇ ಸಣ್ಣ ಗುಂಪುಗಳಲ್ಲಿ ಓದಿದೆವು. ಓದುತ್ತಾ ಗುಂಪುಗಳಲ್ಲಿ ಹೆಣ್ಣುಮಕ್ಕಳ ಸ್ಥಿತಿಗತಿ ಬಗ್ಗೆಯೂ ಮಾತುಕತೆ ನಡೆಯಿತು. ಪುಟ್ಟ ಮಕ್ಕಳ ಗುಂಪಿನಲ್ಲಿ ಮಕ್ಕಳು ತಮ್ಮತಮ್ಮ ಮನೆಕಥೆ ಹೇಳಲು ಶುರು ಮಾಡಿದರು. ಈ ಪುಸ್ತಕ ಕಥೆಯ ರೀತಿ ಇದ್ದುದಕ್ಕೆ ಓದು ಸ್ವಲ್ಪ ಸುಲಭವಾಯಿತು.

ಪುಸ್ತಕ ಓದಿದ ಮೇಲೆ ಐದು ಸಣ್ಣ ಗುಂಪುಗಳಲ್ಲಿ ಮಕ್ಕಳು ಹೆಣ್ಣು ಮಕ್ಕಳ ಸಾಧನೆಗೆ ಸಂಬದಿಸಿದ ಹಾಗೆ ನಾಟಕಗಳನ್ನು ರೂಪಿಸಿದರು. ಸಾವಿತ್ರಿ ಬಾಯಿ ಫುಲೆ ಓದಿದ ಪ್ರಭಾವದಲ್ಲಿ ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಸಂಬಂದಿಸಿದ ಹಾಗೆ ನಾಟಕಗಳು ಇದ್ದವು. ಚಿಕ್ಕ ಸಮಯದಲ್ಲಿ ಸರಳ ಕಥೆಗಳನ್ನು ಇಟ್ಟುಕೊಂಡು ಮಕ್ಕಳು ನಾಟಕ ಮಾಡಿದ್ದರು. ನಾಟಕ ಮಾಡಿದ ಮೇಲೆ ಪುಟ್ಟ ಪುಟ್ಟ ಹುಡುಗಿಯರು ಕೂಡಾ ಪ್ರಶ್ನೆಗಳನ್ನು ಕೇಳಿದ್ದರು. ಹಿಂದಿನ ಕಾಲದಲ್ಲಿ ಯಾಕೆ ಹೆಣ್ಣು ಮಕ್ಕಳನ್ನು ಶಾಲೆಗೆ ಹೋಗಲು ಬಿಡುತ್ತಿರಲಿಲ್ಲ? ಯಾಕೆಜಾತಿ ಹೆಸರಲ್ಲಿ ಭೇದಭಾವ ಮಾಡುತ್ತಾರೆ? ಇವುಗಳ ಸುತ್ತ ಮುತ್ತ ಚಿಕ್ಕ ಪುಟ್ಟ ವಿಚಾರ ವಿವರಿಸಿದೆವು.

**ರಂಗ ಚಟುವಟಿಕೆಗಳು ಮತ್ತುಕರಕುಶಲ ಚಟುವಟಿಕೆಗಳು:** ಓದಿನ ನಡುವೆ ನಾಟಕಕ್ಕೂ ಪೂರಕವಾಗುವ ರೀತಿಯಲ್ಲಿ ಬಹಳಷ್ಟು ರಂಗ ಚಟುವಟಿಕೆಗಳನ್ನು ನಡೆಸಿದ್ದು ಮಕ್ಕಳಿಗೆ ವಿಶೇಷ ಅನುಭವ ಕೊಟ್ಟಿತು. ನಾಟಕ ಮಾಡುವುದು ಮೊದಲಿನಿಂದಲೂ ಮಾಡಿದ್ದೆವು. ಆದರೆ ದೇಹವನ್ನು ಮುಜುಗರವಿಲ್ಲದೆ ಚಟುವಟಿಕೆಗಳಲ್ಲಿ ತೊಡಗಿಸುವುದು ಹೊಸ ಅನುಭವವಾಗಿತ್ತು. ದೇಹವನ್ನು ಹಿಗ್ಗಿಸಿ ಕುಗ್ಗಿಸಿ ಆಡುವ ಆಟಗಳು ನಡಿಗೆಗಳು ಇಡೀ ಹಾಲಿನಲ್ಲಿ ಮುಜುಗರ ಮೀರಲು ಸಹಾಯವಾಗಿತ್ತು. ಮಕ್ಕಳು ನಿಧಾನವಾಗಿ ಒಳಗೊಂಡರು. ಮರವನ್ನು ಮರವಾಗಿ ನೋಡುವ, ಗೌರವದಿಂದ ಮುಟ್ಟುವ ಮತ್ತು ತಬ್ಬಿಕೊಳ್ಳುವ ಒಂದು ಸಂದರ್ಭ ಇತ್ತು. ಮರದ ಹತ್ತಿರ ಹೋಗಿ ಅನುಮತಿ ತೆಗೆದುಕೊಂಡು ತಬ್ಬಿಕೊಳ್ಳಬೇಕಾಗಿತ್ತು. ಮಕ್ಕಳು ಬಹಳ ಸಂಕೋಚ ಪಟ್ಟರು. ನಾವು ದೊಡ್ಡವರು ಆಚೆ ಹೋದ ಮೇಲೆ ಅಲ್ಲಿಇಲ್ಲಿ ಮರಗಳನ್ನು ತಬ್ಬಿಕೊಳ್ಳತೊಡಗಿದರು.

ಬಣ್ಣದ ಹಾಳೆಯಲ್ಲಿ ಹೂವು, ವೃತ್ತ ಪತ್ರಿಕೆಯಲ್ಲಿ ಹಕ್ಕಿ ಮತ್ತು ಪೆನ್ ಸ್ಟಾಂಡ್ ಇತ್ಯಾದಿ ಮಾಡುವಾಗ ಸಂಪೂರ್ಣ ತಲ್ಲೀನರಾಗುತ್ತಿದ್ದರು . ಮಕ್ಕಳಲ್ಲಿ ಓದುವ ಬರೆಯುವ ಸಾಮರ್ಥ್ಯ ಬಹಳ ಕಡಿಮೆ ಇದೆ. ಇದೊಂದು ಸವಾಲೇ ಹೌದು. ಒಂದು ಪೋಸ್ಟರ್ ಮಾಡಬೇಕೆಂದರೂ ತಪ್ಪಿಲ್ಲದೆ




ಒಂದು ವಾಕ್ಯ ಬರೆಯಲು ಕಷ್ಟ ಪಡುತ್ತಾರೆ. ಓದುವಾಗ ಚಿಕ್ಕ ಮಕ್ಕಳು ಮಾತ್ರವಲ್ಲ ದೊಡ್ಡ ಮಕ್ಕಳೂ ಕೂಡಾ ತೊದಲುತ್ತಾರೆ. ಒಂದು ಸಂದರ್ಭದಲ್ಲಿಒಬ್ಬ ಹುಡುಗಿ ಹೇಳಿದಳು, "ಈ ಶಿಬಿರದಲ್ಲಿ ಓದು ಬರಹದಲಿ ದೊಡ್ಡವರಾಗದೇ ಹೋದರೂ ಬೇರೆ ಬೇರೆ ದಾರಿಗಳು ಇವೆ ಅಂತ ಗೊತ್ತಾಯಿತು."

ಇದಕ್ಕೆ ನಿಜವಾಗಿಯೂ ಹೇಗೆ ಪ್ರತಿಕ್ರಿಯಿಸಬೇಕು ಎನ್ನುವುದು ನಮಗೇ ಗೊತ್ತಾಗಲಿಲ್ಲ. ಮೊದಲ ದಿನ ಹೊರಗಿನಿಂದ 11 ಮಂದಿ ಮಕ್ಕಳು ಬಂದಿದ್ದರು. ಏನಾಯಿತೋ ಮರುದಿನ ಕೆಲವರೇ ಉಳಿದರು. ಆದರೆ ಉಳಿದ ಮಕ್ಕಳು ಆಶ್ರಮದ ಮಕ್ಕಳ ಜೊತೆ ಚೆನ್ನಾಗಿ ಹೊಂದಿಕೊಂಡರು . 'ಮನೆಯಲ್ಲಿ ಇರುವಾಗ ಏನೇನೋ ನೆಗೆಟಿವ್ ಯೋಚನೆಗಳು ಬರುತ್ತವೆ, ಇಲ್ಲಿ ತುಂಬಾ ಪಾಸಿಟಿವ್ ಯೋಚನೆಗಳು ಬಂದವು' – ಅಂದರು.

'ನಾನು ದೊಡ್ಡವಳಾದ ಮೇಲೆ ಇವರ ಜೊತೆ ಸೇರಿಕೊಳ್ಳಬೇಕು; ಇಲ್ಲವೆ ಇವರ ಹಾಗೆ ನಾನೂ ಮಕ್ಕಳಿಗೆ ಶಿಬಿರ ಮಾಡಬೇಕು' ಎಂದು ಒಬ್ಬಳು ಹುಡುಗಿ ಅಂದಳು. ನಿಮ್ಮಆಶ್ರಮದ ಊಟ ರುಚಿರುಚಿಯಾಗಿದೆ ಅಂತ ಹೇಳಿದರೆ, 'ನಿಮ್ಮ ಮಾತೂ ರುಚಿರುಚಿಯಾಗಿದೆ' ಅಂತ ಒಬ್ಬ ಪುಟ್ಟ ಹುಡುಗಿ ಹೇಳಿದಳು. 'ರಾಶಿ ರಾಶಿ ಪ್ರೀತಿ'ಅಂತ ನಮ್ಮನ್ನು ಚುಡಾಯಿಸುವುದೂ ಇತ್ತು. ನಡುನಡುವೆ ನಿದ್ದೆತೂಗಿದವರೂ ಇದ್ದಾರೆ. ನಮಗೆ ನಾಟಕ, ನಮಗೆ ಕ್ರಾಫ್ಟ್, ನಮಗೆ ಅದು ಇದು ಅಂಥ ದಿಕ್ಕು ತಪ್ಪಿಸುವುದೂ ನಡೆದಿದೆ. ಕೆಲವೊಂದು ಇಷ್ಟವಾದರೂ ಕೆಲವೊಂದು ಅಷ್ಟಾಗಿ ಇಷ್ಟವಾಗದಿದ್ದರೂ ಮನಸಾರೆ ಭಾಗವಹಿಸುತ್ತಿದ್ದರು . ಎಲ್ಲದರ ನಡುವೆ ಮಕ್ಕಳು ಅರಳುವುದು ನೋಡುವುದೇ ಒಂದು ಖುಶಿ , ಸಂತೃಪ್ತಿ ಭಾವ. ಮೂರೂ ದಿನಗಳು ಕ್ಷಣಗಳಂತೆ ಕಳೆದು ಹೋದವು. ತುಂಬಾ ತುಂಬಾ ಪ್ರೀತಿಯನ್ನು ಹೊತ್ತುಕೊಂಡು ಹಿಂತಿರುಗಿದೆವು. ಮುಂದಿನ ಸಾರಿ ಮೂರು ದಿನ ಅಲ್ಲ ಹತ್ತು ದಿನ ನಮ್ಮ ಜೊತೆಗೆ ಇರಬೇಕು ಅನ್ನುವ ಡಿಮ್ಯಾಂಡ್ ಇಟ್ಟಿದ್ದಾರೆ . ಎಂದಿನಂತೆ ಮೇರಿ ಮೇಡಮ್ ಅವರ ಆದರ ಆತಿಥ್ಯ, ಪುಷ್ಪ ಅವರ ಸಹಕಾರ, ಪುಟ್ಟಜ್ಜಿ ಅವರ ಕೈ ಅಡಿಗೆ, ಮರೆಯುವ ಹಾಗೇ ಇಲ್ಲ. ■





# *Demise of* **Dhirubhai Mehta** Veteran Gandhian ..

- S P Kalantri

It is with deep sorrow that we announce the passing of Dhirubhai Mehta, President of Kasturba Health Society, Sevagram, who left us on April 22, 2024 . He passed away peacefully, with his son Nirad and daughter Maitry by his bedside.

He was just about to turn 88 this weekend .

Born in Songadh, a village 28 km west of Bhavnagar, Gujarat on 27 April 1936, Dhirubhai hailed from a middle-class family.

He went on to preside over one of the best medical schools in the country.

Dhirubhai's schooling was in a Gujarati Medium school in his village where he studied up to the 7th standard. A brilliant student, after matriculation, he joined the Sydenham College of Commerce and Economics, Mumbai and in the summer of 1957, he graduated with a B.Com (Hon) from Mumbai University. He then pursued Chartered Accountancy. To finance his education and support his family, he gave tuitions and worked part-time. He passed both CA examinations on his first attempt, earning his CA degree in 1961 and becoming the 5635th certified Chartered Accountant in the country.

Fascinated by Khadi and inspired by Gandhi's principles, Dhirubhai embraced Khadi at a young age, starting in 1954. He strongly believed that Khadi bonded rich and poor, and equated Khadi to self-reliance and self-government. The

seeds of patriotism and virtuousness were sown early on in Dhirubhai's life.

On May 1, 1966, Dhirubhai married Dhirubhai Mehta, , daughter of Shri Radhakrishnaji Bajaj and the granddaughter of Shrikrishnadas Jajoo, a veteran freedom leader and a well-known Gandhian

Dhirubhai was not born into riches, nor was he ever spoon-fed success and fame. But he always believed in himself and made it big in his life. He had a razor-shop financial mind and uncanny financial wizardry. In 1966, he met Mr. Kamalnayan Bajaj, the architect of the Bajaj group. At Mr. Bajaj's behest, he joined Bajaj group in 1966 until two decades later, he voluntarily, and prematurely, retired from professional life in 1986.

With no influential connections, Dhirubhai Mehta's ascent was swift. He impressed the Bajaj family with his expertise in finance, investment, taxation and corporate management, coupled with a touch of humour and wit.

During the early seventies, he played a crucial role in navigating a prolonged legal dispute between the Bajaj group and Piaggio of Italy over the Vespa scooter, showcasing his dedication and expertise. Throughout his tenure, he earned the trust of key figures within the Bajaj family, emerging as a valued confidant.

Throughout his tenure with Bajaj, he earned the trust of Kamalnayan, Ramakrishna, and Rahul Bajaj, becoming a valued confidant.

Decades later, when a family dispute erupted between Kushagra and his father Shishir on one side, and Rahul along with three other cousins (Shekhar, Madhur, and Niraj) on the other, the Bajaj family sought Dhirubhai's help to resolve the conflict. True to his impartial nature, Dhirubhai refused to take sides and facilitated a memorandum of understanding in February 2004. Although the solution he proposed didn't endure, this event underscores the immense trust the entire Bajaj family placed in Dhirubhai.

Beyond his contributions to the Bajaj group, Dhirubhai served on various regulatory committees and held a directorship at Mukand Iron & Steel Works Limited. His commitment to ethical principles extended into every aspect of his professional life, earning him respect and admiration in both business and political circles.

At the age of fifty, Dhirubhai faced a difficult decision. He decided to quit Bajaj Auto and work full time in the not-for-profit health and education sector. "It was a tough call for me," he admitted. "Nirad and Maitry were still pursuing their education, with Nirad aspiring to complete his commerce studies at prestigious universities in the USA. It required financial resources.




However, my family stood by me and fully supported my choice."

His children ultimately pursued careers as chartered accountants. "It seems to be a genetic predisposition," he would joke, "but I'm glad they achieved it independently, without relying on me or asking for financial assistance.

Although his professional moorings were in business and industry, Dhirubhai began wondering if it was worth spending all his life in the corridors of the corporate world.

Had Dhirubhai continued his stint, Bajaj Auto shares would have touched new heights, but a medical school would have been a loser.

From the land of capitalism, Mumbai, he came to Sevagram. Sevagram was not a new place for Dhirubhai- his wife came from Wardha

and he used to visit the city frequently because Bajaj group office was located in Wardha. He did earn money during his Bajaj days, like a capitalist, but he became trustee of his wealth and decided to give up further earning of money after he had crossed 50.

Over the next four decades, he donated generously, supporting the cause of the education of girls and even donating substantially to the very institute he was presiding. A true Gandhian to the core, Dhirubhai strove consistently to bring in the timeless principles of the Mahatma in the boardrooms of the corporate world and conference rooms of leading NGOs.

Dhirubhai Mehta, the founder President of Kasturba Health Society and Director of Mahatma Gandhi Institute of Medical Sciences, Sevagram, was running a medical school in Sevagram. Although the central and the state governments took care of three-quarters of the budget, Dr. Sushila Nayar found it difficult to raise her own share—25%—year after year.

In 1982 Dhirubhai Mehta, the Mumbai based founder trustee of the Kasturba Health Society introduced Dhirubhai to Dr Nayar and suggested she use his financial wizardry in managing the medical school. Dr Sushila Nayar saw Dhirubhai's role to help her in the progress and development of the medical school and requested him to join the board of the Kasturba Health Society, an offer he gleefully accepted. He started devoting his substantial time for the institute.

In 1986 Dr Sushila Nayar offered him the post of vice-president.

When he joined, MGIMS was run on a modest budget of 80 lakhs per annum. Dhirubhai brought his financial expertise to Sevagram, managed the cash flows, and helped the institute not only with a solid financial group. Over the course of 40 years, under his guidance, the KHS budget grew substantially to 240 crores.

In the late nineties, following a heart attack, Dr Sushila Nayar gradually handed over all responsibilities of managing the organisation to Dhirubhai. Seen as an heir apparent to Dr Nayar, Dhirubhai ensured that the medical school didn't deviate an inch from the principles laid down by his mentor.

" When I came to Sevagram in 1982, I couldn't even spell or pronounce names of half the departments of the hospital," Dhirubhai would often jokingly say. He quickly learnt the intricacies of the job and in the Nehruvian mode, brought distinguished academicians on the board of Kasturba Health Society, asking them to play an active and meaningful role in spreading scientific temper in the institute. He was instrumental in bringing Dr Manu Kothari, Ashok Vaidya, Dr JL Gupta, Dr Dave, BS Chaubey, GM Taori—to name just a few—on the board of Kasturba Health Society.

Dr. Sushila Nayar passed away in January 2001. The governing body of the Kasturba Health Society unanimously elected Dhirubhai as the president of the Society soon after.

Dhirubhai stayed true to these ideals. Neither the commercialization of medical education, nor the proliferation of medical schools in the country, nor the expansion of private for-profit hospitals in the vicinity of Sevagram could deter him or lead him astray from his principles.

Dhirubhai adhered to the organizational ethics to the hilt—ensuring fairness, honesty, transparency, efficiency and displayed zero tolerance for corruption. He had people working for him, but he had a tight rein on every part of the process.

All I want is for MGIMS to provide top-notch education and healthcare that's accessible to all," he would summarize his philosophy in a straightforward statement.

Under his leadership, MGIMS completely unlinked itself from the sponsorship of drug industry, successfully ran a low-cost drug initiative in the hospital, and introduced various essential initiatives. The list includes a hospital information system, a unit for adopting newborns of unwed mothers, trauma centers, medicine department buildings, ICUs, a Cath Lab, dialysis units, alcohol and drug de-addiction centers, a mother and child center, and a palliative care center. He also oversaw the construction of numerous hostels



for medical students and residents.

Dhirubhai's passion for public health was evident in his nurturing of the community medicine department, where he encouraged innovation and supported the implementation of new ideas and concepts.

Melghat, nestled in the Satpura mountain range in Maharashtra, is home to the Korku Adivasis. The villagers faced limited healthcare access and poor infrastructure, with malnutrition-related deaths often making headlines. Recognizing this urgent need, Dhirubhai Mehta and Mr. SR Halbe, his associate and a family friend, established a healthcare center. They secured full support from MGIMS, urging residents, physicians, and nurses to devote themselves to serving this underserved community, reflecting their dedication to addressing injustice in healthcare.

Dhirubhai also made a point to personally visit the center. During these visits, he offered hope, encouragement, and moral support to its healthcare workers, further solidifying their commitment to improving healthcare access in Melghat.

Never one to mince words, Dhirubhai Mehta fearlessly expressed his views, unafraid of the repercussions. He was known for his courage in speaking truth to power, never hesitating to call out injustice or hypocrisy.

During the tumultuous 20 months of the national emergency, declared on the night of June 25, 1975, a pall of gloom descended upon the nation. The citizens felt shocked and stirred. Throughout this period, an eerie silence prevailed. Individuals offered praise to the rulers of the Emergency regime. Civil servants, when asked to bend, crawled without hesitation.

While still employed at Bajaj Auto, he boldly opposed the state of emergency enforced by Prime Minister Indira Gandhi. This was a courageous stance, considering his full-time corporate responsibilities, yet he fearlessly stood against what he perceived as a threat to democracy.

In the midst of these challenging times, when Jayaprakash Narayan (JP) was diagnosed with chronic kidney disease and transferred from PGI Chandigarh to Bombay's Jaslok Hospital, Dhirubhai was actively working with the Bajaj group. Despite the looming threat of arrest, Dhirubhai and his wife, Nandini, showed remarkable courage by faithfully visiting JP at the hospital, providing him with food, books, and their time. Not only did Dhirubhai stand in solidarity with JP's cause, but he also

took proactive steps to raise funds for the movement, undeterred by the potential consequences such as job loss or arrest.

In that era, he considered JP as the conscience keeper of the country. Until JP passed away on October 8, 1979, Dhirubhai and Nandini became a part of their extended family. Dhirubhai fully supported him, funding his causes and taking care of the organisation.

Nandini and Dhirubhai went above and beyond, assuming the key role in organizing JP's daughter's wedding—Janaki wedded Kumar Prashant—where they not only facilitated the sacred ceremony of Kanyadan but also shouldered the responsibility of ensuring every detail was meticulously attended to, symbolizing their steadfast support for JP's cause and their deep personal connection to his family.

Dhirubhai was also a long admirer of Vinoba Bhave but was disillusioned by Vinoba's tacit support of emergency, which he called Anushasan Parv. Dhirubhai didn't hesitate to take cudgels for JP's movement and wrote strong letters to Vinobaji arguing that his support was inexplicable.

Closely associated with several trusts —the Saurashtra Trust, Shivananda Mission, Kasturba Gandhi National Memorial Trust, Rajkot Swami Shivananda Eye Hospital, Kasturba Gandhi National Memorial Trust and Gandhi Peace Foundation—Dhirubhai invested considerable time,efforts and funds to support these Non-Government Organisations. Kind, loving, funny, and always thoughtful of others, Dhirubhai knew how to encourage and boost the morale of those who worked in adverse settings.

Dhirubhai had a tendency to have strong likes and dislikes. As one who always trusted his intuition over objective assessments, he once famously said, "Don't try to confuse me with data. I have already made up my mind." Indeed, all during his Sevagram days, he earned the reputation of being a quick decision maker, sometimes throwing caution to the winds.

"I love to take risks in life. And my intuitions and risk-taking ability have paid off, most of the time," he would say. Dhirubhai Mehta's willingness to embrace risks reflected his confidence and adventurous spirit, leading to many successful endeavours throughout his life.

He was an avid reader, immersing himself in literature in both English and Gujarati. He eagerly devoured whatever material he could get his hands on. In February 2016, he teamed with Mr Sheshrao Chavan to author a 551-page book "Sardar Vallabhbhai Patel- A Man of Few Words and Many Triumphs". He also wrote hundreds of articles expressing his view on different matters of national and social importance. His



articles always carried his frank viewpoint on many financial and political decisions.

On August 14, 2022, Nandini, Dhirubhai's wife, passed away at the age of 80, after years of battling diabetes and high blood pressure, which had taken a toll on her kidneys. A talented poetess with a deep understanding of Hindi literature, Nandini refused to bask in the reflected glory of Dhirubhai. Instead, she published several acclaimed books and recited her poems on various life themes, countrywide, carving her own niche. Her passing deeply affected Dhirubhai, marking the end of their 56-year partnership and leading him into a brief period of struggle with loneliness.

Despite this personal challenges, he remained committed to attending all meetings, both in Sevagram and Delhi, to ensure the smooth running of the institute.

Sevagram held a special place in Dhirubhai's heart and soul. Just a fortnight before, he had visited Sevagram and actively participated in all administrative decisions. His wife Nanda often remarked that he lived and breathed Sevagram every day of his life. In the final stage of his life, nothing mattered to him more than Sevagram medical college. He dedicated his thoughts and efforts to preserving the tradition and culture of the institute he had been associated with for four decades.

**Dhirubhai stayed true to these ideals. Neither the commercialization of medical education, nor the proliferation of medical schools in the country, nor the expansion of private for-profit hospitals in the vicinity of Sevagram could deter him or lead him astray from his principles.**

Since its inception, MGIMS has had a tradition of requiring all first-year medical students to spend a fortnight in Gandhi's Ashram shortly after their admission. Here, they learn medicine under the guidance of their teachers while also imbibing the values of self-reliance through practical tasks such as sweeping floors, washing clothes, cleaning utensils, and attending prayer sessions at 5 am. Additionally, they learn the art of spinning yarn, a skill advocated by Gandhi. Dhirubhai took a keen interest in these activities, often engaging in free sessions with the students to discuss the relevance of Khadi and Gandhi in modern times.

During these interactions, he not only addressed their questions but also gained insights into their unspoken concerns and needs, particularly those who were unfamiliar with village life. He also attended social service camps alongside the students, where they stayed in dormitories in villages. Here, he freely mingled with the students, joining them for dinner and providing guidance, which he took great pride in sharing at social gatherings.

During his frequent visits to Sevagram, which occurred nearly every month, he made it a routine to tour the entire campus during his 5-kilometer walk. This allowed him to observe firsthand the developments on campus and stay attuned to the pulse of the institution. At the crack of dawn, he would open his doors to the staff members of the medical college and hospital. People would come in with their concerns, grievances, and personal matters, finding in him a patient listener who tried to assist them as much as he could.

Some visitors took advantage of his openness, exploiting his kindness for personal gain. Despite being aware of his vulnerability to flattery, Dhirubhai remained accessible to all, leaving his doors open to anyone in need. "I must know why they knock," he'd often say, showing his commitment to addressing everyone's concerns in the institution.

In our quest for greatness, Sevagram must not stop working hard. "Let's come together to embrace new ideas, use technology, and build more facilities to make sure everyone in our community can access healthcare," he would passionately advocate,

repeating his vision in every meeting, year after year.

His humility and knack for connecting with people, regardless of their status, left a profound impact on all who encountered him.

During my frequent interactions with Dhirubhai, I discovered another aspect of his life: his deep religious devotion. He dedicated an hour each morning and evening to performing Puja, and whenever he was in Sevagram, he made it a point to visit the Goddess Durga temple in Wardha every day. Standing before the idol in the temple for nearly 15 minutes with closed eyes and a serene expression, he would offer his heartfelt prayers to the Goddess. "I owe everything in life to Amba Mata," he would often say. "I am because she showers incessant blessings on me and stands by me through thick and thin."

This deep faith and trust in God, coupled with a strong belief in fate, stood in sharp contrast to his personality. Despite his reliance on divine guidance, he also saw himself as the master of his own destiny, taking responsibility for all his actions and their consequences.

Dhirubhai dedicated four decades of his life to Sevagram, tirelessly striving to ensure that the institute maintained its position at the forefront of healthcare in the country. He refused to compromise despite the temptations of privatization and profit-driven medical practices.

His commitment and integrity set a standard that will be challenging to match.

As we bid farewell to a remarkable person, we are reminded of the immense impact he had on Sevagram and the countless lives he touched through his selfless service and unwavering dedication. His departure marks the end of an era for Sevagram, yet his legacy will continue to inspire and guide us in the years to come. ■



"ಗಾಂಧೀವಾದ ಅಥವಾ ತತ್ವ ಎಂಬುದಿಲ್ಲ. ನಾನು ಯಾವ ಹೊಸ ಸಿದ್ಧಾಂತವನ್ನು ಕಂಡುಹಿಡಿದಿಲ್ಲ. ನಾನು ಶಾಶ್ವತವಾದ ಸತ್ಯವನ್ನು ನಮ್ಮ ದೈನಂದಿನ ಜೀವನದ ಸಮಸ್ಯೆಗಳನ್ನು ಬಗೆಹರಿಸುವುದರಲ್ಲಿ ಅನುಸರಿಸುತ್ತಿರುವೆ ಅಷ್ಟೇ. ನಾನು ತಾಳಿದ ಅಭಿಪ್ರಾಯಗಳು ಹಾಗೂ ನಿರ್ಣಯಗಳು ಕೊನೆಯವೂ ಹಾಗೂ ಶಾಶ್ವತವಾದವೂ ಅಲ್ಲ, ಅವು ನಾಳೆ ಬದಲಾಗಬಹುದು. ನಾನು ಜಗತ್ತಿಗೆ ಕಲಿಸುವುದೇನಿಲ್ಲ. ಸತ್ಯ, ಅಹಿಂಸೆಗಳು ಗುಡ್ಡ ಬೆಟ್ಟಗಳಷ್ಟೇ ಹಳೆಯವು .

ಇವುಗಳ ವಿಚಾರದಲ್ಲಿ ನಾನು ಕೆಲವು ಪ್ರಯೋಗಗಳನ್ನು ಮಾಡಿರುವೆನು. ಇವುಗಳನ್ನು ರಾಜಕೀಯ ಹಾಗೂ ಸಾಮಾಜಿಕ ಜೀವನದಲ್ಲಿ ವ್ಯಾಪಕವಾಗಿ ಪ್ರಯೋಗಿಸಲು ಪ್ರಯತ್ನಿಸಿದ್ದೇನೆ. ನಾನು ಕೆಲವು ಸಾರಿ ತಪ್ಪಿದ್ದೇನೆ, ನಾನು ತಪ್ಪಿನಿಂದ ಕಲಿತಿದ್ದೇನೆ. ಇದನ್ನು ಗಾಂಧೀವಾದ ಎಂದು ಕರೆಯಬೇಡಿ".

ಪುಸ್ತಕ ಪರಿಚಯ

# ತಮಿಳು ನಾಡಿನಲ್ಲಿ ಮಹಾತ್ಮ

ತಮಿಳು ಭಾಷೆಯ ಪ್ರತಿಷ್ಠಿತ ಪುಸ್ತಕಗಳನ್ನು ಇಂಗ್ಲಿಷ್ . ಕನ್ನಡ . ಮಲೆಯಾಳಂ ಮತ್ತು ತೆಲುಗು ಭಾಷೆಗಳಿಗೆ ಅನುವಾದ ಮಾಡುವ ಘೋಷಣೆಯನ್ನು ತಮಿಳುನಾಡು ಸರ್ಕಾರ 2021 –22 ರಲ್ಲಿ ಮಾಡಿದೆ. ಇದರ ಮುಂದುವರಿದ ಭಾಗವಾಗಿ ತಮಿಳುನಾಡಿನ ಪಠ್ಯಪುಸ್ತಕ ಮತ್ತು ಶೈಕ್ಷಣಿಕ ಸೇವಾ ಕಾರ್ಪೋರೇಷನ್ ಹಲವಾರು ಕೃತಿಗಳ ಅನುವಾದವನ್ನು ಕೈಗೆತ್ತಿಕೊಂಡು ಕಾರ್ಯನಿರತವಾಗಿದೆ.

' ತಮಿಳು ನಾಡಿನಲ್ಲಿ ಮಹಾತ್ಮ ' ಎನ್ನುವ ಮೂಲ ತಮಿಳಿನ ಈ ಮೂಲ ಕೃತಿಯು 2023 ರಲ್ಲಿ ಕನ್ನಡಕ್ಕೆ ಅನುವಾದಗೊಂಡಿದೆ . ಕನ್ನಡದಲ್ಲಿ ಗೌರಿ ಮೀಡಿಯಾ ಟ್ರಸ್ಟ್ ಈ ಪುಸ್ತಕವನ್ನು ಕನ್ನಡದಲ್ಲಿ ಪ್ರಕಟಿಸಿದೆ. ಸುಮಾರು 950 ಪುಟಗಳ ಈ ಬೃಹತ್ ಪುಸ್ತಕದ ಬೆಲೆ 1100 ರೂಗಳು . ಎ ರಾಮಸ್ವಾಮಿ ಎನ್ನುವ ಹಿರಿಯ ಲೇಖಕರು ತಮಿಳಿನಲ್ಲಿ ರಚಿಸಿರುವ ಈ ಕೃತಿಯನ್ನು ಸಿರಿಮನೆ ನಾಗರಾಜ್ ಮತ್ತು ಎಂ ಎಸ್ ಪ್ರಕಾಶ್ ಅವರು ಕನ್ನಡಕ್ಕೆ ಭಾಷಾಂತರಿಸಿದ್ದಾರೆ .

ತಮಿಳುನಾಡು ಸರ್ಕಾರದ ಈ ಉದ್ದೇಶ ನಿಜಕ್ಕೂ ಮೆಚ್ಚುವಂತದ್ದು. ತಮಿಳಿನ ಪ್ರತಿಷ್ಠಿತ ಕೃತಿಗಳು ಇತರೆ ಭಾಷೆಗಳಿಗೆ ಅನುವಾದಿತವಾಗಿ ಪ್ರಕಟಗೊಳ್ಳ ಬೇಕು ಎನ್ನುವುದು ಈ ಯೋಜನೆಯ ಆಶಯ . ಕರ್ನಾಟಕದಲ್ಲಿ ಕೂಡಾ ' ಕುವೆಂಪು ಭಾಷಾ ಭಾರತಿ ' ಸಂಸ್ಥೆಯು ಇದೇ ರೀತಿಯ ಆಶಯವನ್ನು ಇಟ್ಟು ಕೊಂಡಿದೆ. ಕನ್ನಡದ ಅಮೂಲ್ಯ ಕೃತಿಗಳು ಇತರೆ ಭಾಷೆಗಳಿಗೆ ಮತ್ತು ಇತರೆ ಭಾಷೆಯ ಅಮೂಲ್ಯ ಕೃತಿಗಳು ಕನ್ನಡಕ್ಕೆ ಬರ ಬೇಕೆಂಬುದು ಕರ್ನಾಟಕ ಸರ್ಕಾರದ ಆಶಯವಾಗಿದೆ. ಕುವೆಂಪು ಭಾಷಾ ಭಾರತೀಯ ಮಾದರಿಯಲ್ಲೇ ತಮಿಳು ನಾಡು ಸರ್ಕಾರ ಕೈಗೊಂಡಿರುವ ಯೋಜನೆ ಯಶಸ್ವಿಯಾಗಲಿ ಎಂದು ಹಾರೈಸುತ್ತೇವೆ .




## ವಿಶ್ವವ್ಯಾಪಿ ಬಾಪು



ಆಸ್ಟ್ರೇಲಿಯಾದ ಕ್ಯಾನ್ಬೆರಾ ನಗರದ ಗ್ಲೇಬ್ ಪಾರ್ಕ್ ನಲ್ಲಿ ಆಗಸ್ಟ್ 08.2002 ರಂದು ಭಾರತದ ಸ್ವಾತಂತ್ರ್ಯ ಶಿಲ್ಪಿ, ಸತ್ಯಾಗ್ರಹ ಅನ್ವೇಷಕ, ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರ ಕಂಚಿನ ಪುತ್ಥಳಿಯನ್ನು ಕಾಮನ್ ವೆಲ್ತ್ ಗವರ್ನರ್ ಜನರಲ್ ಡಾ.ಪೀಟರ್ ಹಾಲಿಂಗ್ ವರ್ತ್ ರವರು ಪ್ರತಿಮೆ ಅನಾವರಣಗೊಳಿಸಿದರು.

ಬಾಪೂಜಿ ಪ್ರತಿಮೆಯ ಕೆಳಭಾಗದಲ್ಲಿ ಅವರು ಪ್ರತಿ ಪಾದಿಸಿದ ಮೌಲ್ಯಗಳನ್ನು ಮತ್ತು ಜಗತ್ ಖ್ಯಾತಿಯ ವಿಜ್ಞಾನಿ ಅಲ್ಬರ್ಟ್ ಐನ್ ಸ್ಟೀನ್ ರವರು ಮಹಾತ್ಮನ ಕುರಿತು ಹೇಳಿರುವ ಈ ಘನತೆಯ ಸಾಲುಗಳನ್ನು ಇಲ್ಲಿ ಕೆತ್ತಲಾಗಿದೆ.

'Generations to come, it may be, will scarcely believe that such a one as this ever in flesh and blood walked upon this earth'.

ಪ್ರಸಿದ್ಧ ಕಲಾವಿದ ರಾಮ್ ಸುತಾರ್ ಬಾಪೂ ಈ ಪ್ರತಿಮೆಯನ್ನು ವಿನ್ಯಾಸ ಮಾಡಿ ನಿರ್ಮಿಸಿದ್ದಾರೆ.

# ಮತದಾರ ಜಾಗೃತಿ ಶಿಬಿರ ...






ಗ್ರಾಮ ಸೇವಾ ಸಂಘ ಹಾಗೂ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಾಗೂ ಗಾಂಧೀ ಪ್ರಣೀತ ಸಂಘಟನೆಗಳು ಜಂಟಿಯಾಗಿ ಆಯೋಜಿಸಿದ್ದ ಮತದಾರರಿಗೆ ಅರಿವು ನೀಡಲು ಮತದಾರ ಜಾಗೃತಿ ಕಾರ್ಯಕ್ರಮ ಬೆಂಗಳೂರಿನ ವಲ್ಲಭನಿಕೇತನ ಆಶ್ರಮದಲ್ಲಿ ನಡೆಯಿತು.

ಗಾಂಧೀವಾದಿಗಳು, ಸಾಮಾಜಿಕ ಕಾರ್ಯಕರ್ತರು ಹಾಗೂ ಶೇಷಾದ್ರಿ ಪುರಂ ಶಿಕ್ಷಣ ಸಂಸ್ಥೆಯ ರಾಷ್ಟ್ರೀಯ ಸೇವಾ ಯೋಜನೆಯ ವಿದ್ಯಾರ್ಥಿಗಳು ಬೆಳಿಗ್ಗೆ 7 ಗಂಟೆಗೆ ಆಶ್ರಮದಲ್ಲಿ ಸೇರಿ ಶ್ರಮದಾನದ ಮೂಲಕ ಆವರಣವನ್ನು ಸ್ವಚ್ಛಗೊಳಿಸಿದರು . ಪ್ಲಾಸ್ಟಿಕ್ , ಅನಗತ್ಯ ತ್ಯಾಜ್ಯವನ್ನು ಬೇರ್ಪಡಿಸಿ, ತಿಪ್ಪೆಗುಂಡಿ ಮಾಡಿ ತರಗೆಲೆಗಳನ್ನೆಲ್ಲ ಗೊಬ್ಬರಕ್ಕಾಗಿ ಅದರಲ್ಲಿ ಒಟ್ಟುಗೂಡಿಸಿದರು.



**ಶೇಷಾದ್ರಿಪುರಂ ಕಾಲೇಜಿನ ಎನ್ ಎಸ್ ಎಸ್ ಕಾರ್ಯಕರ್ತರು ಶ್ರಮದಾನ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.**

ಇದರ ಜೊತೆ ಜೊತೆಗೆ ಚರಕದಿಂದ ನೂಲುತೆಗೆಯುವ ವಿಧಾನವನ್ನು ಆಶ್ರಮದ ಸರ್ವೋದಯ ಕಾರ್ಯಕರ್ತೆ ಗಿರಿಜಾ ಹೆಗಡೆಯವರು ವಿದ್ಯಾರ್ಥಿಗಳಿಗೆ ನೂಲು ತೆಗೆದು ತೋರಿಸಿದರು . ಹಿರಿಯ ಪತ್ರಕರ್ತ ಶಂಕರ್ ಅವರು ಅಸ್ಸಾಂನ ಜನಪ್ರಿಯ ಗಾಯಕ ದಿವಂಗತ ಭೂಪೆನ್ ಹಜಾರಿಕಾ ಅವರು ಹಾಡಿದ್ದ ಹಳೆಯ ದೇಶಭಕ್ತಿ ಗೀತೆಗಳನ್ನು ಹಾಡಿದರು .

ಲೇಖಕ, ರಾಜಕೀಯ ತಜ್ಞ ಸುಧೀಂದ್ರ ಕುಲಕರ್ಣಿ ಮಾತನಾಡಿ, "ಭಾರತ ಅತ್ಯಂತ ಹೆಚ್ಚು ಜನಸಂಖ್ಯೆ ಹೊಂದಿರುವ ಮತ್ತು ಅತಿದೊಡ್ಡ ಪ್ರಜಾಪ್ರಭುತ್ವ ದೇಶ, ಆದ್ದರಿಂದ ನಾವು ಎಷ್ಟು ಯೋಚಿಸಿ ಮತದಾನ ಮಾಡುತ್ತೇವೆ ಎಂಬುದು ಜಾಗತೀಕ ರಾಜಕೀಯದಲ್ಲಿ ಬೃಹತ್ ಪಾತ್ರವಹಿಸಲಿದೆ. ಟಾಗೋರರನ್ನು ನಾವಿಂದು ನೆನೆಸಬೇಕು, ಅವರು ಭಾರತ ಹಾಗೂ ಚೈನಾ ಜಗತ್ತಿನ ಅತ್ಯಂತ ಹಳೆಯ ಸಂಸ್ಕೃತಿಗಳು. ಅವೆರಡು ರಾಷ್ಟ್ರಗಳು ಈಗ ಒಟ್ಟಿಗೆ ಸಾಗಬೇಕಾಗಿರುವ ಅಗತ್ಯವನ್ನು ಬಹಳ ಹಿಂದೆಯೇ ಸಾರಿದ್ದರು. ಇದು ಈಗಲೂ ನಮ್ಮ ಮನಸ್ಸಿನಲ್ಲಿ ಉಳಿಯ ಬೇಕು " ಎಂದು ಹೇಳಿದರು .

ರಂಗಕರ್ಮಿ, ಗ್ರಾಮ ಸೇವಾ ಸಂಘದ ಸಂಚಾಲಕ ಪ್ರಸನ್ನ ಕಾರ್ಯಕ್ರಮವನ್ನು ಮುನ್ನಡೆಸುತ್ತ ಹೇಳಿದರು " ಮತದಾರರೆಲ್ಲ ಗ್ರಾಮ ಸ್ವರಾಜ್ಯದ ಪರಿಕಲ್ಪನೆಯನ್ನು ಎತ್ತಿಹಿಡಿಯುವ, ಗ್ರಾಮೀಣ ಅರ್ಥವ್ಯವಸ್ಥೆ ಮತ್ತು ಗ್ರಾಮೀಣ ಭಾರತದೆಡೆಗೆ ದಕ್ಷತೆ ಇರುವ ಪಕ್ಷಗಳಿಗೆ ಮತನೀಡುವಂತೆ ಕೋರಿದರು.

ಶಿಕ್ಷಣ ತಜ್ಞ, ಗಾಂಧೀಭವನದ ಅಧ್ಯಕ್ಷರಾದ ವುಡೇ ಪಿ ಕೃಷ್ಣ ಗಾಂಧಿ ತತ್ವಗಳನ್ನು ಅದರ ಮೌಲ್ಯ ಗಳನ್ನು ರೂಪಿಸಿಕೊಳ್ಳುವ ಬಗ್ಗೆ ಮಾತನಾಡಿದರು.

ಲೇಖಕ, ಶಿಕ್ಷಣ ತಜ್ಞ ಮುರಳೀಧರ್ ಅವರು ವಿವೇಕಾನಂದರು ಚಿಕಾಗೋದ ಸರ್ವ ಧರ್ಮ ಸಮ್ಮೇಳನದಲ್ಲಿ ಭಾಗವಹಿಸಿದ್ದರ ಬಗ್ಗೆ ಮತ್ತು ಅದರ ಇಂದಿನ ಪ್ರಾಮುಖ್ಯತೆಯನ್ನು ತಿಳಿಸಿದರು.

ಗಾಂಧೀವಾದಿಗಳಾದ ಪ್ರೊ. ಶಿವರಾಜ್, ಪರಿಸರ ತಜ್ಞ ಯತಿರಾಜ್, ಹಿರಿಯ ಸರ್ವೋದಯ ನಾಯಕ ಮೆನನ್ , ಗಾಂಧಿಭವನದ ಕಾರ್ಯಾಧ್ಯಕ್ಷರಾದ ಎನ್ ಆರ್ ವಿಶುಕುಮಾರ್ , ಗೌರವ ಕಾರ್ಯದರ್ಶಿ ಎಮ್.ಸಿ.ನರೇಂದ್ರ, ಯುವ ಸರ್ವೋದಯ ಕಾರ್ಯಕರ್ತರಾದ ಶಾರದ, ಅಭಿಲಾಶ್ , ಭಾರತೀಯ ವಿಜ್ಞಾನ ಸಂಸ್ಥೆಯಲ್ಲಿ ವ್ಯಾಸಂಗ ಮಾಡುತ್ತಿರುವ ರತೀಶ್, ಇತರರು ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು.

– ಸವಿತಾ ನಾಗಭೂಷಣ

## ಚಿ|ತ್ರಾ|ವ|ಳಿ



ಹಿರಿಯ ಗಾಂಧಿವಾದಿ ಹಾಗೂ ಕೇಂದ್ರ ಗಾಂಧಿ ಸ್ಮಾರಕ ನಿಧಿಯ ಸದಸ್ಯ ಮತ್ತು ಕಸ್ತೂರ್ ಬಾ ಗಾಂಧಿ ರಾಷ್ಟ್ರೀಯ ಸ್ಮಾರಕ ಟ್ರಸ್ಟ್ ನ ಸದಸ್ಯರಾದ ಧೀರೂಭಾಯಿ ಮೆಹತಾ ಅವರ ನಿಧನಕ್ಕೆ ಗಾಂಧಿ ಭವನದಲ್ಲಿ ಸಂತಾಪ ಸಲ್ಲಿಸಲಾಯಿತು .



ನವದೆಹಲಿಯಲ್ಲಿ ಧೀರೂಬಾಯಿ ಮೆಹತಾ ಅವರಿಗೆ ಕೇಂದ್ರ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ರಾಮಚಂದ್ರ ರಾಹಿ ಗೌರವ ನಮನ ಸಲ್ಲಿಸಿದರು.





ಪಾಂಡವಪುರದ ವಿಜಯ ಕಾಲೇಜಿನಲ್ಲಿ ಗಾಂಧಿ ಸ್ಮಾರಕ ನಿಧಿಯ ಆಶ್ರಯದಲ್ಲಿ ನಡೆದ ಎನ್ ಎಸ್ ಎಸ್ ಶಿಬಿರದ ಉದ್ಘಾಟನಾ ಮತ್ತು ಸಮಾರೋಪ ಕಾರ್ಯಕ್ರಮ





ಅರಸೀಕೆರೆಯ ಕಸ್ತೂರ್ ಬಾ ಗಾಂಧಿ ಟ್ರಸ್ಟ್ ವತಿಯಿಂದ ಸ್ಥಳೀಯ ಮಹಿಳಾ ಉದ್ಯಮಿಗಳಿಗಾಗಿ ಮದ್ದೂರು ತಾಲ್ಲೂಕು ಮಾರ್ನೋಮಿ ದೊಡ್ಡಿಯಲ್ಲಿ ನಿರ್ಮಾಣವಾಗುತ್ತಿರುವ ಕಾರ್ಯ ಘಟಕದ ತಳಹದಿ ಕಾಮಗಾರಿ .

